ಸಂಶೋಧನ ಕೋಟಿ ಮಾಲೆ : ೩

ಚಂದ್ರಕವಿ ವಿರಚಿತ

# ಶಂಕರ ಶತಕ

ಸಂಪಾದಕ :
ಸಿ. ಮಹಾದೇವಪ್ಪ, ಎಂ.ಎ.,
(ಪ್ರಿನ್ಸಿಪಾಲ್)



ಸಂಶೋಧನ ಕೋಟಿ
ಪ್ರಥಮ ದರ್ಜೆ ಕಾಲೇಜ್, ಚಿಕ್ಕಮಗಳೂರು.

ಚಂದ್ರಕವಿ ವಿರಚಿತ

# ಶಂಕರ ಶತಕ

ಶ್ರೀ ಕಾಶಿ ಜ್ಞಾನ ಸಿಂಹಾಸನಾಧೀಶ್ವರ
ಶ್ರೀ ಶ್ರೀ ಶ್ರೀ 1008 ಜಗದ್ಗುರು
ಡಾ|| ಚಂದ್ರಶೇಖರ ಶಿವಾಚಾರ್ಯ
ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಗೆ
ಭಕ್ತಿಪೂರ್ವಕ ಸಿ. ಮಹಾದೇವಪ್ಪ.


ಸಂಪಾದಕ :

ಸಿ. ಮಹಾದೇವಪ್ಪ, ಎಂ.ಎ., 8.1.1999.

(ಪ್ರಿನ್ಸಿಪಾಲ್)

ಬೆಂಗಳೂರು ಸಂಶೋಧನ ಕೇಂದ್ರ
ನಂ.197, 5ನೇ ಮುಖ್ಯರಸ್ತೆ
ವೈಯಾಲಿಕಾವಲ್
ಬೆಂಗಳೂರು 560003.



ಸಂಶೋಧನ ಕೋಟ

ಪ್ರಥಮ ದರ್ಜೆ ಕಾಲೇಜ್, ಚಿಕ್ಕಮಗಳೂರು.


Rs 10.00.

# ಮೊದಲ ಮಾತು

ವಿಜಯನಗರದ ಪ್ರೌಢದೇವರಾಯನ ಕಾಲದ ಚಂದ್ರಕವಿಯ ಈ ಶಂಕರ ಶತಕ ಇದುವರೆಗೂ ಪ್ರಕಟವಾಗದೆ ಇದ್ದು ಈಗ ಮೊತ್ತಮೊದಲಿಗೆ ಬೆಳಕು ಕಾಣುತ್ತಿದೆ.

ಕರ್ಣಾಟಕ ಕವಿಚರಿತೆಯೇ ಮೊದಲಾದ ಕನ್ನಡ ಸಾಹಿತ್ಯಚರಿತ್ರೆಗಳಲ್ಲಿ ಉಕ್ತವಾಗದೆ ಇರುವ ಸುಮಾರು ಇಪ್ಪತ್ತಮೂರು ಶತಕಗಳನ್ನು ಈ ಗ್ರಂಥಪೀಠಿಕೆಯ ಒಂದು ಅಧ್ಯಾಯದಲ್ಲಿ ಉಲ್ಲೇಖಗಳೊಡನೆ ಪರಿಚಯ ಮಾಡಿಕೊಡಲಾಗಿದೆ. ಸುಮಾರು ಕ್ರಿ.ಶ. ೧೬೨೦ ರಲ್ಲಿ ಇದ್ದಿರಬಹುದೆಂದು ತೋರುವ ಗುರುನಂಜೇಸ್ವಾಮಿಯ ಶಿವಕಾರುಣ್ಯಾಹ್ವಾನವೇ ಮೊದಲಾದ ಮೂರು ಶತಕಸಂಕಲನಗಳೂ, ಬೇರೆ ಮೂರು ಸಮಗ್ರ ಶತಕಗಳೂ ದೊರಿತುದರಿಂದ ಈ ಅಪೂರ್ವ ಶತಕಗಳ ಸಂಗತಿಯನ್ನು ಕಂಡು ಹಿಡಿಯಲು ಸಾಧ್ಯವಾಯಿತು. ಕನ್ನಡ ಶತಕಸಾಹಿತ್ಯದ ಹೊಸ ಅಧ್ಯಾಯವನ್ನು ತೆರೆಯುವ ಗುರುನಂಜೇಸ್ವಾಮಿಯ ಮೂರು ಶತಕಸಂಕಲನಗಳು ಸಾಹಿತ್ಯ ಚರಿತ್ರೆಗೆ ಆತನು ನೀಡಿದ ಅಪೂರ್ವ ಕಾಣಿಕೆಗಳಾಗಿವೆ.

ಪ್ರಾಚೀನ ಪದ್ಯಕೃತಿಗಳನ್ನು ಅಭ್ಯಾಸಮಾಡುವವರ ಸಂಖ್ಯೆ ಅಲ್ಪವೆಂದು ಹೇಳಬೇಕಾಗಿಲ್ಲ. ಆ ಕಾರಣ ಸಾಹಿತ್ಯಾಭ್ಯಾಸಿಗಳಿಗೆ ಸುಗಮವಾಗಲೆಂಬ ಉದ್ದೇಶ ದಿಂದ ಚಂದ್ರಕವಿಯ ಈ ಶತಕದ ಪ್ರತಿಯೊಂದು ಪದ್ಯಕ್ಕೂ ತಾತ್ಪರ್ಯವನ್ನು ರಚಿಸಿ ಗ್ರಂಥದ ಎಡಪಕ್ಕದ ಪುಟದಲ್ಲಿ ಕೊಡಲಾಗಿದೆ. ಅಲ್ಲದೆ ಗ್ರಂಥಾಂತ್ಯದಲ್ಲಿ ಶಬ್ದಕೋಶ ವನ್ನು, ಪದ್ಯಗಳ ಅಕಾರಾದಿಯನ್ನೂ ಒದಗಿಸಿದೆ. ಆಧ್ಯಾತ್ಮಿಕ ಒಲವನ್ನುಳ್ಳ ಓದುಗರ ಆತ್ಮಸಂಪತ್ತನ್ನು ಬೆಳಗುವ ಈ ಕೃತಿಯನ್ನು ವಿಮರ್ಶಾತ್ಮಕ ಪೀಠಿಕೆ ಹಾಗೂ ಪಾಠಾಂತರ ಸಮೇತ ಸಂಪಾದಿಸಿ ಪ್ರಥಮತಃ ಸಹೃದಯರ ಕೈಗೆ ಒಪ್ಪಿಸಲು ಸಂತೋಷವಾಗುತ್ತದೆ.

ಈ ಗ್ರಂಥಸಿದ್ಧತೆಗೆ ನೆರವಾದ ಸ್ವಂತ ತಾಡವೋಲೆ ಭಂಡಾರದ ಮೂರು ಪ್ರತಿಗಳ ಜೊತೆಗೆ ಗ್ರಂಥ ಮುದ್ರಣದ ಕಾಲದಲ್ಲಿ ದೊರೆತ ನಾಲ್ಕನೆಯ ಓಲೆಪ್ರತಿ ಮೂಡಬಿದಿರೆಯದು. ಅದನ್ನು ಅಕ್ಕರೆಯಿಂದ ಒದಗಿಸಿಕೊಟ್ಟ ವಿದ್ಯಾಭೂಷಣ ಶ್ರೀ ಕೆ. ಭುಜಬಲಿಶಾಸ್ತ್ರಿ ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ಅತ್ಯಂತ ಶ್ರದ್ಧೆಯಿಂದ ಅಂದವಾಗಿ ಈ ಶತಕವನ್ನು ಮುದ್ರಣಮಾಡಿಕೊಟ್ಟ ಚಿ|| ನಟರಾಜ್, ಬಿ.ಎಸ್‌ಸಿ., ತಾಂಡವಮೂರ್ತಿ ಪ್ರೆಸ್ ಮಾಲಿಕರು, ಇರ್ವಿನ್ ರೋಡ್, ಮೈಸೂರು—ಇವರಿಗೆ ನನ್ನ ಮೆಚ್ಚಿಕೆಗಳು.

೬–೩–೧೯೬೫. ಸಿ. ಮಹಾದೇವಪ್ಪ.

# ೧ ಪೀಠಿಕೆ

ಕನ್ನಡ ಸಾಹಿತ್ಯದ ಬೆಳವಣಿಗೆಯ ಇತಿಹಾಸದಲ್ಲಿ ಗಣ್ಯಸ್ಥಾನವನ್ನು ಪಡೆದ ಕೃತಿ ಪ್ರಕಾರಗಳಲ್ಲಿ ಶತಕಪ್ರಬಂಧವೂ ಒಂದು. ಪ್ರಾಚೀನ ಚಂಪೂಕಾವ್ಯಗಳು ಕನ್ನಡದಲ್ಲಿ ಮುಗಿಲು ಮುಟ್ಟುವಂತೆ ಮಹೋನ್ನತವಾಗುತ್ತಿದ್ದಂತೆಯೇ ತಲೆಯೆತ್ತಿದ ಈ ಸಾಹಿತ್ಯ ಪ್ರಕಾರ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವಂಥದು. ಸುದೀರ್ಘವಾದ ಕಥಾವಸ್ತು, ಪಾತ್ರರಚನೆ, ಬಹುಮುಖವಾದ ವರ್ಣನೆಗಳೇ ಪ್ರಧಾನವಾದ ಚಂಪೂಕಾವ್ಯಗಳ ಕಾಲದಲ್ಲಿಯೇ ಶತಕಪ್ರಬಂಧದಂತಹ ಲಘುಕೃತಿಗಳ ಆವಶ್ಯಕತೆ ತೀವ್ರವಾಗಿದ್ದಿರಬೇಕು. ಆ ಕಾರಣವೇ ಬಹುಮಟ್ಟಿಗೆ ಚಂಪೂಕಾವ್ಯ ಪ್ರಬಂಧಗಳನ್ನು ರಚಿಸುತ್ತಿದ್ದ ಕವಿಗಳೇ ಶತಕಪ್ರಬಂಧಗಳನ್ನೂ ರಚಿಸತೊಡಗಿದರು. ಆದರಿಂದ ಕನ್ನಡ ಶತಕ-ಸಾಹಿತ್ಯಕ್ಕೂ ಪ್ರಾಚೀನತೆ ದೊರೆಯುವಂತಾಯಿತು. ಅಲ್ಲದೆ ಚಂಪೂಕೃತಿಯ ಕಥೆ, ರಚನೆ, ವರ್ಣನೆಗಳ ಸಂಪ್ರದಾಯಪಾಲನೆಯ ತೊಡಕಿನಲ್ಲಿ ಸಿಲುಕಿಕೊಂಡು ಅಲ್ಲಿ ಪಡೆಯಲಾಗದೆಹೋದ ಆತ್ಮಸ್ವಾತಂತ್ರ್ಯವನ್ನು ಕವಿ ಶತಕಪ್ರಬಂಧದಲ್ಲಿ ಪಡೆದನೆನ್ನಬಹುದು.

ಶತಕಪ್ರಬಂಧ ವಸ್ತುನಿಷ್ಠವಾದುದಕ್ಕಿಂತಲೂ ಹೆಚ್ಚಾಗಿ ಆತ್ಮನಿಷ್ಠವಾದುದು. ಕವಿ ತನ್ನ ಆತ್ಮಸಾಧನೆಯ ಅನುಭವಗಳನ್ನು ಬಿಡಿ ಬಿಡಿಯಾದ ಪದ್ಯಗಳಲ್ಲಿ ಚಿತ್ರಿಸಿ ಒಂದು ಚೌಕಟ್ಟಿನೊಳಗೆ ಬರುವಂತೆ ಮಾಡುವನು. ಸ್ವಸಂಪೂರ್ಣವೂ ಏಕೈಕವೂ ಆದ ಭಾವದ ಅಭಿವ್ಯಕ್ತಿಯಿಂದ ಕೂಡಿದ ಪ್ರತ್ಯೇಕ ಪದ್ಯಗಳನ್ನೊಳಗೊಂಡಿರುವುದೇ ಶತಕದ ವೈಶಿಷ್ಟ್ಯ. ಸ್ವಾನುಭಾವದ ಕುಸುಮವಾಗಿ ಅರಳಿದ ಶತಕಪ್ರಬಂಧ ಆತ್ಮವಿಕಾಸದ ಅಂತರಂಗ ನಿರೂಪಣೆ. ಆ ಕಾರಣ ಆತ್ಮಸ್ವರೂಪದ ನಿಜದರಿವನ್ನು ಪಡೆದ ಪ್ರತಿಭಾವಂತರಾದ ಶತಕಕಾರರ ಆಧ್ಯಾತ್ಮಿಕ ಅನುಭವ, ಭಕ್ತಿ, ಜ್ಞಾನ, ವೈರಾಗ್ಯಗಳಿಗೆ ಶತಕಪ್ರಬಂಧ ಒಳ್ಳೆಯ ಕವಿತಾಸಾಧನವಾಗಿದೆ. ಮುಕ್ತಿಸಾಧನೆಯ ಮೂಲವಾದ ಈ ಭಕ್ತಿ, ಜ್ಞಾನ ಮತ್ತು ವೈರಾಗ್ಯಗಳ ನಿರೂಪಣೆಯೇ ಶತಕರಚನೆಯ ಮೂಲೋದ್ದೇಶ.

ಕನ್ನಡ ಶತಕಸಾಹಿತ್ಯಕ್ಕೆ ಸಂಸ್ಕೃತ ಕವಿಗಳಾದ ಬಾಣ, ಮಯೂರ ಮೊದಲಾದ ಭಕ್ತಾಗ್ರೇಸರರ ಶತಕಗಳೇ ಆದಿಯಲ್ಲಿ ಪ್ರೇರಣೆಯನ್ನೂ, ಮಾರ್ಗದರ್ಶನವನ್ನೂ ನೀಡಿದುವೆಂದು ಹೇಳಬಹುದು. ಹಾಗೆಯೇ ವಚನಸಾಹಿತ್ಯದ ಅನುಭಾವ-ಸಂಪತ್ತು ಒದಗಿ ಪುಷ್ಟಿ ಲಭಿಸಿದೆಯೆನ್ನಬಹುದು. ಕನ್ನಡ ಶತಕಸಾಹಿತ್ಯದ ಆದಿಕವಿಯಾದ ಹರಿಹರನ ಪಂಪಾಶತಕ ರಕ್ಷಾಶತಕಗಳಲ್ಲಿ ಶಿವಭಕ್ತಿಯ ನಿಷ್ಠೆಯನ್ನೂ ವೈರಾಗ್ಯದ ಉತ್ಕಟತೆಯನ್ನೂ ಕಾಣಬಹುದು. ಕವಿಯ ಭಕ್ತಿರಸದ ಆವೇಶದಿಂದ ಮೈಗೊಂಡ ಶತಕಸಾಹಿತ್ಯ ದೈವಮೂಲವಾದ ಸಾಹಿತ್ಯಪ್ರಕಾರಗಳಲ್ಲಿ ಒಂದು. ಆ ಕಾರಣ ಶತಕಪ್ರಬಂಧ ಸ್ವರೂಪತಃ ಸ್ತೋತ್ರರೂಪವಾದುದು. ಹೀಗೆ ಮೊದ

ಮೊದಲು ಕನ್ನಡಸಾಹಿತ್ಯದಲ್ಲಿ ಶಿವಸ್ತುತಿಯಾಗಿ, ಶಿವನ ನೆನಹಾಗಿ, ಆತ್ಮಸಂಗತಿಯಾಗಿ ಹೊರಹೊಮ್ಮಿದ ಶತಕಪ್ರಬಂಧ ಕ್ರಮೇಣ ತತ್ತ್ವಪ್ರಧಾನವೂ ನೀತಿಬೋಧಕವೂ ಶೃಂಗಾರಸಾರವೂ ಸಾಮಾಜಿಕವೂ ಕ್ಷೇತ್ರಮಾಹಾತ್ಮೆಯೂ ಆಗಿ ಪರಿಣಮಿಸುತ್ತ ಬಂದಿತೆನ್ನಬಹುದು. ಕೇವಲ ವೃತ್ತರೂಪದಿಂದ ಕಾಣಿಸಿಕೊಂಡ ಶತಕಪ್ರಬಂಧ ಬರಬರುತ್ತ ಕಂದ, ಷಟ್ಪದಿ, ಸಾಂಗತ್ಯಗಳ ರೂಪವನ್ನು ಪಡೆದು ಜನಪ್ರಿಯವಾಗುತ್ತ ಬಂದಿತು. ಇದರಿಂದ ಶತಕಸಾಹಿತ್ಯ ಕನ್ನಡ ಭಾಷೆಯ ಬೆಳವಣಿಗೆಯೊಡನೆ ಒಂದು-ಗೂಡಿ ಬೆಳೆಯುತ್ತ ಬಂದಿದೆ ಎಂಬುದು ಸ್ಪಷ್ಟವಾಗಿದೆ.

ಶತಕಪ್ರಬಂಧ ಶುದ್ಧಸಾಹಿತ್ಯದಂತೆ ಕೇವಲ ರಸಾನಂದಕ್ಕಾಗಿ ಮೀಸಲಾಗ ದಿದ್ದರೂ ನಿರ್ದಿಷ್ಟವಾದ ತನ್ನ ತತ್ತ್ವೋದ್ದೇಶವನ್ನು ಆ ರಸಪಥದ ಮೂಲಕವೆ ಸಾಧಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ಹಾಗೆ ಸಾಧಿಸುವಾಗ ಶತಕಕಾರ ಕೇವಲ ಕವಿಯಂತೆ ಓದುಗನನ್ನು ತನ್ನ ಕವಿತಾಚಮತ್ಕಾರದಿಂದ ಮಾರುಹೋಗುವಂತೆ ಮಾಡುವುದು ಆತನ ಉದ್ದೇಶವಲ್ಲ, ಆತ್ಮಾನುಭವದ ಸತ್ಯದ ಔನ್ನತ್ಯಕ್ಕೆ ಕೈಹಿಡಿದು ಕರೆದೊಯ್ಯುವ ಯತ್ನ ಆತನದು. ಆಧ್ಯಾತ್ಮಿಕ ಮೌಲ್ಯದತ್ತ ಮಾನವನ ಮನಸ್ಸನ್ನು ಸೆಳೆದು ಅದರಲ್ಲಿ ನೆಲೆಗೊಳಿಸುವುದರಲ್ಲಿಯೇ ಆತನ ಶಕ್ತಿ ಅಡಗಿದೆ. ಪ್ರತಿಭಾವಿಕಾಸವಿಲ್ಲದೆ ಆ ಕಾರ್ಯ ವನ್ನು ಸಾಧಿಸಲು ಯಾರಿಗೂ ಸಾಧ್ಯವಾಗದು. ಆದ್ದರಿಂದ ಶತಕಕಾರನು ತನ್ನ ಆಧ್ಯಾತ್ಮಿಕ ಅನುಭವಗಳ ಸರಳ ಸುಂದರವಾದ ನಿರೂಪಣೆಯನ್ನು ಮನಮುಟ್ಟುವಂತೆ ಮಾಡಬಲ್ಲ ಸಾಮರ್ಥ್ಯವನ್ನು ಗಳಿಸಿದಾಗ ಕವಿಯಾಗುವನು; ಓದುಗನ ಮನೋಜಾಡ್ಯ ವನ್ನು ಹರಿದು ಆತನ ಚಿತ್ತವನ್ನು ಸಚ್ಚಿದಾನಂದದಲ್ಲಿ ಎಚ್ಚರಗೊಳಿಸಿದಾಗ ಗುರು ವಾಗುವನು. ತಾನರಸುವ ಪರವಸ್ತುವಿನ ಪರಮಾನುಭವವನ್ನು ಆತ್ಮೀಯವಾದ ತನ್ನ ನುಡಿಯಿಂದ ಮನಗಾಣಿಸಿದಾಗ ವಚನಕಾರನಂತೆ ಅನುಭಾವಿಯೆನಿಸುವನು. ತನ್ನ ಅನುಭಾವದ ಮಹದೈಶ್ವರ್ಯದಲ್ಲಿ ತನ್ನಂತೆ ಇತರರೂ ಪಾಲುಗೊಳ್ಳುವಂತೆ ಮಾಡ ಬೇಕೆಂಬುದೇ ತಾತ್ತ್ವಿಕನಾದ ಶತಕಕಾರನ ಬಯಕೆ. ಮುಕ್ತಿಯೇ ಆತನ ಚರಮೋದ್ದೇಶ.

ಆಸಕ್ತನಾದ ಓದುಗನಲ್ಲಿ ಉತ್ಸಾಹವನ್ನು ಉಕ್ಕಿಸಿ ಆತ್ಮವಿಶ್ವಾಸವನ್ನೂ ಪರಮಾತ್ಮನಿಷ್ಠೆಯನ್ನೂ ಹೊಂದುವಂತೆ ಮಾರ್ಗದರ್ಶನ ನೀಡುವ ಶತಕಕಾರನ ರಚನಾರೀತಿಯಲ್ಲಿ ನೀತಿಯಿದೆ. ಆ ಉಪದೇಶಕ್ರಮದಲ್ಲಿ, ಆತ್ಮಸಂಬೋಧೆಯ ಅರಿವಿ ನಲ್ಲಿ ಅನನ್ಯತೆಯ ಪ್ರಜ್ಞೆಯಿದೆ. ಆ ಆತ್ಮವಿಕಾಸದಿಂದ ಆತ್ಮೋನ್ನತಿಯನ್ನು ಹೊಂದುವ ಕಾರಣ ಭಕ್ತಿ, ಜ್ಞಾನ, ವೈರಾಗ್ಯ ಪ್ರಧಾನವಾದ ಶತಕಗಳು ಸಮಾಜ ದಲ್ಲಿ ಆಧ್ಯಾತ್ಮಿಕವೃತ್ತಿಯನ್ನು ಮೂಡಿಸಲು ಇರುವ ಸುಲಭಸಾಧನಗಳೆಂದು ಹೇಳ ಬಹುದು. ಜನಾಂಗವನ್ನು ನೀತಿಮಾರ್ಗದಲ್ಲಿ ಕರೆದೊಯ್ದು ಅವರಲ್ಲಿ ಸತ್ಯ, ಧರ್ಮ, ಅಹಿಂಸೆ, ನಿಸ್ವಾರ್ಥಸೇವಾ ತತ್ಪರತೆ-ಇವುಗಳನ್ನು ಮೂಡಿಸುವುದರಿಂದ ಆ ಶತಕಗಳು ಸಮಾಜದ ಆತ್ಮಪ್ರಗತಿಗೆ ನೆರವಾದ ಸೋಪಾನವೆನ್ನಬಹುದು. ಜನತೆಯಲ್ಲಿ ದೈವೀ

ದೃಷ್ಟಿ ದೂರವಾದಾಗ, ಜೀವದ ಮೌಲ್ಯಕ್ಕೆ ಕುಂದೊದಗಿದಾಗ, ಪ್ರೀತಿ, ವಾತ್ಸಲ್ಯ, ದಯೆ, ವಿಶ್ವಾಸಗಳು ಹೃದಯದಲ್ಲಿ ಬತ್ತಿ ಹೋಗುವುವೋ ಎನ್ನುವಾಗ, ಅಜ್ಞಾನ, ಅಹಂಕಾರಗಳ ಅಂಧಕಾರದಲ್ಲಿ ಮುಳುಗಿಹೋಗುವಾಗ ಜೀವನನ್ನು ಮೇಲೆತ್ತಿ ಬೆಳಕು ಕಾಣಿಸಿ ದಾರಿ ತೋರುವ ಶತಕಸಾಹಿತ್ಯ ಸಮಾಜದ ಸಮರಸಜೀವನದ ಸಾಧನ. ವ್ಯಕ್ತಿಗೆ ಮುಕ್ತಿಮಾರ್ಗವನ್ನು ತೋರುವ ಶತಕಗಳು ಸಮಾಜಕ್ಕೆ ಶತಮುಖವಾಗಿ ಸಹ ಬಾಳ್ವೆಯ ಸನ್ಮಾರ್ಗವನ್ನು ಕಾಣಿಸಿಕೊಡುವ ಕಾರಣ ಅವು ನಿಜವಾದ ಹಿತೈಷಿಗಳು.

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತ ಪ್ರಕಾರಮಿದು ಸುಖಮಿದು ದು।
ಖೋಪಾತ್ತಮಿದೆಂದಱಿಪುಗು
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ ॥

ಎಂದು ಹೇಳುವ ನೃಪತುಂಗನ ಕವಿರಾಜಮಾರ್ಗದಲ್ಲಿನ ಕಾವ್ಯಲಕ್ಷಣ ಶತಕ ಸಾಹಿತ್ಯಕ್ಕೇ ಹೆಚ್ಚು ಒಪ್ಪುವುದು. ಈ ಸಾಹಿತ್ಯ ಸಮಾಜದ ಒಳ್ಳಿತಿನ ದೃಷ್ಟಿಯಿಂದ ಹೆಚ್ಚು ಪರಿಣಾಮಕಾರಿಯೂ ಆಗಿದೆ. ವ್ಯಕ್ತಿ ತನ್ನ ಸಮಸ್ಯೆಯ ಪರಿಹಾರವನ್ನು ಕಂಡುಕೊಳ್ಳಲು ಬೇಕಾದ ವಿವೇಚನೆಯನ್ನು ಮೂಡಿಸುವುದರಿಂದ ಶತಕದ ಅಭ್ಯಾಸ ಅತ್ಯಗತ್ಯವೆಂದು ಬೇರೆ ಹೇಳಬೇಕಾದುದಿಲ್ಲ.

ಶತಕವೆಂದರೆ ನೂರು ಪದ್ಯಗಳ ಪ್ರಬಂಧ. ಶತವರ್ಷ ಬಾಳೋಣವೆಂಬ ಭಾರತೀಯನ ದೃಢಸಂಕಲ್ಪ ಸೂಚಕವೋ ಅಥವಾ ತನ್ನ ಇಷ್ಟದೈವದ ಪಾದಾರ್ಚನೆಗೆ ಅರ್ಪಿಸುವ ಪದ್ಯಪತ್ರಮಯ ಪುಷ್ಪವೋ ಎಂಬಂತೆ ಶತಕಪ್ರಬಂಧದ ಚೌಕಟ್ಟಿನಲ್ಲಿ ನೂರುಪದ್ಯಗಳಿರುತ್ತವೆ. ಕೆಲವು ವೇಳೆ ನೂರೊಂದು, ನೂರೆಂಟು ಪದ್ಯಗಳೂ ಇರುವು ದುಂಟು. ಒಮ್ಮೊಮ್ಮೆ ನೂರಿಪ್ಪತ್ತೆಂಟರವರೆಗೂ ಆ ಪದ್ಯಸಂಖ್ಯೆ ಮುಂದು ವರಿದಿರುವುದುಂಟು.

ವಚನಕಾರರು ತಮ್ಮ ವಚನಗಳ ಅಂತ್ಯದಲ್ಲಿ ಇಷ್ಟಲಿಂಗದ ಅಂಕಿತವನ್ನು ಬಳಸುವಂತೆ ಕನ್ನಡದ ಶತಕಕಾರರು ತಮ್ಮ ಶತಕಗಳ ಪದ್ಯಗಳಲ್ಲಿ ಇಷ್ಟದೈವದ ಅಂಕಿತವನ್ನು ಬಳಸಿರುತ್ತಾರೆ. ಈ ಅಂಕಿತ ಅಥವಾ ಮುದ್ರಿಕೆಯನ್ನು ಪದ್ಯಾಂತದಲ್ಲಿ ಬಳಸುವ ಪದ್ಧತಿ ತೆಲುಗುಶತಕಗಳಲ್ಲಿಯೂ ಉಂಟು. ಆದರೆ ಸಂಸ್ಕೃತ ಶತಕ ಗಳಲ್ಲಿಲ್ಲ. ಈ ಮುದ್ರಿಕೆಗೆ ತೆಲುಗಿನಲ್ಲಿ ಪಾದಮುಕುಟವೆಂದೆನ್ನುವರು. ಸಾಧಾರಣ ವಾಗಿ ಇಷ್ಟದೈವದ ಸ್ತುತಿರೂಪವಾದ ಶತಕದ ಮುದ್ರಿಕೆ ಅದರ ಅಂಗ ರಚನೆಯ ಲ್ಲೊಂದಾಗಿದೆ. ಒಂದೇ ಒಂದು ಶತಕವನ್ನು ಒಬ್ಬ ಕವಿ ಬರೆದಾಗ ಅದರಲ್ಲಿ ಸಾಧಾರಣ ವಾಗಿ ಒಂದೇ ಅಂಕಿತವನ್ನು ಆ ಶತಕದಲ್ಲಿ ಬಳಸುವನು. ಕೇವಲ ಅಪೂರ್ವವಾಗಿ ಗುಮ್ಮಟಾರ್ಯನಂತಹ ಶತಕಕಾರರು ಒಂದೇ ಶತಕದ ಪೂರ್ವಾರ್ಧದಲ್ಲಿ ಒಂದು ಅಂಕಿತ ವನ್ನೂ ಉತ್ತರಾರ್ಧದಲ್ಲಿ ಮತ್ತೊಂದು ಅಂಕಿತವನ್ನೂ ಬಳಸಿರುವರು. ಒಂದಕ್ಕಿಂತ

ಹೆಚ್ಚಾಗಿ ಶತಕಗಳನ್ನು ಬರೆದಾಗ ಪ್ರತ್ಯೇಕತೆಗಾಗಿ ಇಷ್ಟದೈವದ ಬೇರೆಬೇರೆ ಅಂಕಿತ ಗಳನ್ನು ಬಳಸಿರುವುದುಂಟು.

ಈ ಅಂಕಿತಗಳ ಬಳಕೆಯಲ್ಲಿ ಇಷ್ಟದೈವದ ನಾಮಸ್ಮರಣೆಯನ್ನು ತಂದು ಆ ದೈವದ ಪುರಾಣಪ್ರಸಿದ್ಧವಾದ ಮಹಿಮೆಯನ್ನು ಕೊಂಡಾಡುವುದೇ ಶತಕಕಾರನ ಉದ್ದೇಶ. ಹಾಗೆ ಇಷ್ಟದೈವವನ್ನು ಕುರಿತು ಆಡಿದ ತನ್ನ ನುಡಿಗಳೆಲ್ಲವೂ ತತ್ತ್ವೋಚಿತವು ಸತ್ಯಸ್ವರೂಪವೂ ಆದುವು; ವಚನತತಿರೂಪವಾದ ಶತಕದಪ್ರಾಶಸ್ತ್ಯಕ್ಕೆ ಸರ್ವಾತ್ಮನಾದ ಪರಮಾತ್ಮನ ಮಹಿಮೆಯ ನಿರೂಪಣೆಯೇ ಕಾರಣವೆಂಬುದು ಶತಕಕಾರನಸ್ಮತ.ಶತಕ ಗಳನ್ನು ಪಠಿಸುವುದರಿಂದ ಭಕ್ತಿ, ಜ್ಞಾನ, ವಿರಕ್ತಿ, ನಿಷ್ಠೆ, ಧೈರ್ಯಸಂಪತ್ತು, ವಿವೇಚನೆ, ಭುಕ್ತಿ ಮುಕ್ತಿಗಳುಂಟಾಗುತ್ತವೆಂದೂ ಅದರಿಂದ ಕಲಿಯುಗದ ಮಲಿನವಾದ ವರ್ತನೆ ತೊಲಗುವುದೆಂದೂ ಆತನ ನಂಬಿಕೆ. ಈ ಧಾರ್ಮಿಕ ಶ್ರದ್ಧೆಯಿಂದ ಮೂಡಿದ ಶತಕ ಸಾಹಿತ್ಯ ಕನ್ನಡದಲ್ಲಿ ಹರಿಹರನಿಂದ ಹಿಡಿದು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ತನಕ ಸುಮಾರು ಎಂಟು ಶತಮಾನಗಳ ಕಾಲ ವಿಪುಲವಾಗಿ ಬೆಳೆದು ನಿಂತಿದೆ. ವೀರ ಶೈವ, ಜೈನ, ಬ್ರಾಹ್ಮಣಕವಿಗಳು ಈ ಸಾಹಿತ್ಯಪ್ರಕಾರಕ್ಕೆ ತಮ್ಮದೇ ಆದ ಕಾಣಿಕೆ ಯನ್ನು ಸಲ್ಲಿಸಿದ್ದಾರೆ. ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರವಾಗಿರುವ ಕೇವಲ ಕೆಲವು ಶತಕಗಳಲ್ಲಿ ದೇಪರಾಜನ ಅಮರುಕಶತಕ ಬಸವಪ್ಪಶಾಸ್ತ್ರಿಗಳು ಕನ್ನಡಿಸಿರುವ ಭರ್ತೃಹರಿಯ ಶೃಂಗಾರ, ವೈರಾಗ್ಯ ಮತ್ತು ನೀತಿಶತಕಗಳು ಮುಖ್ಯವಾದುವು. ಸ್ವತಂತ್ರವಾದ ಶತಕಗಳೇ ಕನ್ನಡದಲ್ಲಿ ಬಹಳ.

## ಶತಕಸಾಹಿತ್ಯದ ಒಂದು ಹೊಸ ಅಧ್ಯಾಯ

ಕನ್ನಡ ಶತಕಸಾಹಿತ್ಯಚರಿತ್ರೆಯಲ್ಲಿ ಒಂದು ಹೊಸ ಅಧ್ಯಾಯವನ್ನು ತೆರೆಯುವ ಕೆಲವು ಪ್ರಾಚೀನಶತಕಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಕರ್ಣಾಟಕ ಕವಿಚರಿತೆಯಲ್ಲಾಗಲಿ, ಉಳಿದ ಯಾವ ಸಾಹಿತ್ಯಚರಿತ್ರೆಗಳಲ್ಲಾಗಲಿ ಉಕ್ತವಾಗ ದಿರುವ ಕಾರಣ ಈ ಶತಕಗಳ ಪರಿಚಯವನ್ನು ಮಾಡಿಕೊಳ್ಳುವುದು ಸೂಕ್ತವಾಗಿದೆ. ಬರೆಹದ ಗುರುನಂಜೇಸ್ವಾಮಿ ಸೇರಿಸಿದ 'ಶಿವಕಾರುಣ್ಯಾಹ್ವಾನಶತಕ' 'ಶಿವಲಿಂಗ ವಿಕಳತೆ ಸನ್ನಿದರ್ಶನ ಅರ್ಚನ ಪೂಜನಾಶತಕ' ಮತ್ತು 'ಕೀರ್ತಿಶತಕ' ಗಳೆಂಬ ಮೂರು ಶತಕಸಂಕಲನಗಳು ನಮಗೆ ದೊರೆತಿವೆ. ಈ ಶತಕಸಂಕಲನಕಾರನು ತನ್ನ ಕಾಲದವರೆಗೆ ರಚಿತವಾಗಿದ್ದ ಎಲ್ಲ ಶತಕಗಳಿಂದ ಪದ್ಯಗಳನ್ನು ತನ್ನ ಸಂಕಲಿತಶತಕ ಗಳಲ್ಲಿ ಉಲ್ಲೇಖಿಸದಿದ್ದರೂ ಬಹು ಪ್ರಸಿದ್ಧವಾಗಿದ್ದ ಶತಕಗಳ ಜೊತೆಗೆ ಈತನಕ ಅಜ್ಞಾತವಾಗಿಯೇ ಉಳಿದಿರುವ ಕೆಲವು ಅಪೂರ್ವ ಶತಕಗಳ ಪದ್ಯಗಳನ್ನು ಆರಿಸಿರು ವುದು ಕಂಡುಬರುತ್ತದೆ. ಇದೊಂದು ಆತನ ಶತಕಸಂಕಲನಗಳ ವೈಶಿಷ್ಟ್ಯ. ಕನ್ನಡ ಶತಕಸಾಹಿತ್ಯದ ಕೃಷಿ ಹೇಗೆ ಸಾಗಿದ್ದಿತೆಂಬುದನ್ನು ಬೆಳಕಿಗೆ ತರುವ ಈ ಸಂಕಲನ ಗಳು ಸಾಹಿತ್ಯಚರಿತ್ರಕಾರರಿಗೆ ಅತ್ಯಮೂಲ್ಯವಾದುವೇ ಸರಿ. ಈ ಮೂರು ಶತಕ

ಸಂಕಲನಗಳು ಪ್ರತ್ಯೇಕವಾಗಿದ್ದರೂ ಪರಸ್ಪರ ಪೂರಕವಾಗಿವೆ. ಅಲ್ಲದೆ ಶತಕ ಪ್ರಬಂಧದ ಪ್ರಧಾನವಸ್ತುವಿನ ನಿರ್ದೇಶನವನ್ನು ಮಾಡಿಕೊಡುತ್ತವೆ. ಶತಕಸಾಹಿತ್ಯ ಬೆಳೆದಂತೆ ಅದರ ಸಂಕಲನಕಾರ್ಯವೂ ಶತಮಾನಗಳ ಹಿಂದೆಯೇ ಆಗಿದೆಯೆಂಬುವಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ. ಕನ್ನಡದಲ್ಲಿ ಶತಕಸಂಕಲನಗಳು ವಿರಳವೆಂದೇ ಹೇಳಬಹುದು. ಅವುಗಳಲ್ಲಿ ಈ ಮೂರು ಶತಕಗಳು ಆದರ್ಶವಾಗಿವೆ; ಪ್ರಾಚೀನವೂ ಆಗಿವೆ.

'ಶಿವಕಾರುಣ್ಯಾಖ್ಯಾನಶತಕ'ದಲ್ಲಿ ೨೧ ಬೇರೆ ಬೇರೆ ಶತಕಗಳಿಂದ ಆಯ್ದು ಕೊಂಡ ೧೧೫ ವೃತ್ತಗಳಿವೆ. ಹರಿಹರನ ಪಂಪಾಶತಕ ರಕ್ಷಾಶತಕಗಳಿಂದ ಆಯ್ದ ಪದ್ಯಗಳಿಂದ ಆರಂಭವಾಗಿ ಗುಮ್ಮಟಶತಕದ ಪದ್ಯದಿಂದ ಅದು ಸಮಾಪ್ತಿಯಾಗಿದೆ. 'ಶಿವಲಿಂಗವಿಕಳತೆ ಸನ್ನಿದರ್ಶನ ಅರ್ಚನಪೂಜನಾಶತಕ'ದಲ್ಲಿ ಶಿವಕಾರುಣ್ಯಾಖ್ಯಾನ ಶತಕದ ಸಂಕಲನಕ್ಕೆ ಸೇರದ ಬೇರೆ ೫ ಶತಕಗಳನ್ನೊಳಗೊಂಡ ಒಟ್ಟು ೧೯ ಶತಕಗಳ ೧೧೦ ವೃತ್ತಗಳಿವೆ. 'ಶಿವಗಣಾನಂದಾಬ್ಧಿ ಚಂದ್ರೋದಯಶತಕ'ದ ವೃತ್ತದಿಂದ ಪ್ರಾರಂಭವಾಗಿ 'ದಾರಿದ್ರ್ಯವಿದ್ರಾವಣಶತಕ'ದ ವೃತ್ತದಿಂವ ಅದು ಮುಕ್ತಾಯ ವಾಗುತ್ತದೆ. ಈ ಉಭಯ ಶತಕಗಳಲ್ಲಿಯೂ ಉಕ್ತವಾಗದೆ ಇರುವ ಬೇರೆ ೪ ಶತಕಗಳ ಉಲ್ಲೇಖಗಳನ್ನೊಳಗೊಂಡ 'ಕೀರ್ತಿಶತಕ'ವೂ ೧೧೦ ವೃತ್ತಗಳಿಂದ ಕೂಡಿದೆ. 'ಚಂದ್ರಲೇಖಾವತಂಸಶತಕ'ದ ಪ್ರಾರಂಭದ ಪದ್ಯದಿಂದ ಮೊದಲಾಗುವ ಈ ಶತಕ ಹರಿಹರನ ಪಂಪಾಶತಕದ ಒಂದು ವೃತ್ತದಿಂದ ತುದಿಗಾಣುತ್ತದೆ. ಈ ಮೂರು ಶತಕ ಗಳಲ್ಲಿಯೂ ಒಟ್ಟು ೩೦ ಬೇರೆ ಬೇರೆ ಶತಕಗಳಿಂದ ಆರಿಸಿಕೊಂಡ ೩೩೫ ಪದ್ಯಗಳಿವೆ. ಹರಿಹರನ ಪಂಪಾಶತಕ ಮತ್ತು ರಕ್ಷಾಶತಕ, ಶಂಕರದೇವರ 'ಗುರುಶಂಕರೇಶ್ವರ ಶತಕ,' ಪ್ರಸ್ತುತ ಚಂದ್ರಕವಿಯ 'ಶಂಕರಶತಕ,' ಗುಮ್ಮಟಾರ್ಯನ 'ಅರ್ಧೇಂದು ಮೌಳಿಶತಕ,' ವೀರಭದ್ರರಾಜನ ಶ್ರೀಪಾರ್ವತೀವಲ್ಲಭಶತಕ, ಉಮಾಮಾಹೇಶ್ವರ ಶತಕ ಮತ್ತು ಪ್ರಾಣನಾಥಶತಕ, ಚೆನ್ನಮಲ್ಲಿಕಾರ್ಜುನದೇವನ ಶಿವಮಹಿಮಾಶತಕ– ಇವುಗಳಿಂದ ಪದ್ಯಗಳನ್ನು ಆರಿಸಿರುವುದರ ಜೊತೆಗೆ ನಾಗವರ್ಮಾಚಾರ್ಯನದೆಂದು ಹೇಳುವ ಚಂದ್ರಚೂಡಾಮಣಿಶತಕದಿಂದಲೂ ಈ ಸಂಕಲನಕಾರ ಪದ್ಯಗಳನ್ನು ಸಂಗ್ರಹಿಸಿದ್ದಾನೆ. ಇದೊಂದು ವಿಶೇಷಸಂಗತಿಯೆನ್ನಬಹುದು. ಆ ಶತಕದಿಂದ ಆತನು ಉಲ್ಲೇಖಿಸಿರುವ ಪದ್ಯಗಳಿವು:—

ನೆರವಿಲ್ಲೆಯ್ದಿ ಪರಿಲ್ಲ ಕಾವವರುಮಿಲ್ಲಾರುಂ ಭವಾರಾತಿಗಂ
ನೆರವಾಗಲ್ತು ದಿಗೆಯ್ದಿ ಸಲ್ವೆ ಱಿಯೆ ಕಾಯಲ್ನೀನೆ ಸಾಮರ್ಥ್ಯಶೇ
ಖರನೆಂದಾಂ ಶರಣಾರ್ಥಿಯಾಗಿ ಮಱಿಯೊಕ್ಕೆಂದೆನ್ನನೀಜನ್ಮಸಾ
ಗರದಿಂದ ಪೊಱಗಿಕ್ಕು ನೀಂ ಕರುಣದಿಂ ಶ್ರೀಚಂದ್ರಚೂಡಾಮಣೀ ||

ಗುರುವುಂ ತಂದೆಯುಮಾಪ್ತನುಂ ಜನನಿಯುಂ ಮತ್ಸ್ವಾಮಿಯುಂ ದೈವಮುಂ
ಹರ ನೀನೆಂದೆ[ರ]ಡಿಲ್ಲದಾಂ ಬಗೆವುತಿರ್ದೆಂ ತೊತ್ತುವೊಕ್ಕೆಂ ಮಹೇ
ಶ್ವರ ನೀಂ ರಕ್ಷಿಪುದೆನ್ನನಾಶ್ರಿತಜನಪ್ರಾಕಾರನೆಂಬೊಂದು ನಾ
ಣ್ಬಿರುದಂ ತೋಱಿನಗಾಶ್ರಿತಂಗೆ ದಯೆಯಿಂ ಶ್ರೀಚಂದ್ರಚೂಡಾಮಣೀ ||

ಶಿವನೇ ಮಹದಾಶ್ರಯನೆಂದು ಆತನನ್ನು ಶರಣುಹೊಕ್ಕು ಶಿವೈಕನಿಷ್ಠೆಯನ್ನು ಹೊಂದಿರುವ ಈ ಶತಕಕಾರನ ಮೇಲಣ ಪದ್ಯಗಳನ್ನು ವೀರಶೈವ ಶತಕಸಂಕಲನಕಾರನಾದ ಗುರುನಂಜೇಸ್ವಾಮಿಯು ಆರಿಸಿರುವುದನ್ನು ನೋಡಿದರೆ ಚಂದ್ರಚೂಡಾಮಣಿ ಶತಕಕಾರ ಶಿವಕವಿಗಳಲ್ಲೊಬ್ಬನೆಂಬುದು ಸ್ಪಷ್ಟ. ಆತನಂತೆ ಗುಮ್ಮಟಾರ್ಯನೂ ಶೈವಕವಿಯಾದುದರಿಂದಲೆ ಆತನ ಶತಕದಿಂದಲೂ ಪದ್ಯಗಳನ್ನು ಆಯ್ದುಕೊಂಡಿದ್ದಾನೆಂಬುದೂ ವೇದ್ಯವಾಗಿದೆ.

ಈ ಶತಕಸಂಕಲನಕಾರ ಮಗ್ಗೆಯ ಮಾಯಿದೇವರ ಶತಕತ್ರಯಗಳಲ್ಲಿ ಯಾವುದೊಂದರಿಂದಲೂ ಪದ್ಯಗಳನ್ನು ಆರಿಸದಿರುವುದಕ್ಕೆ ಕಾರಣ ತಿಳಿಯದು. ಆದರೆ ಈಗ ಅಚ್ಚಾಗಿರುವ ಹರಿಹರನ ಎರಡು ಶತಕಗಳಲ್ಲಿಯೂ[1] ಕಂಡುಬರದ ಒಂದು ಪದ್ಯ ಶಿವಾವಲ್ಲಭ ಎಂಬ ಅಂಕಿತದಿಂದ ಮುಕ್ತಾಯವಾಗುವುದನ್ನು ಕೀರ್ತಿಶತಕದಲ್ಲಿ ಕಾಣಬಹುದು.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ
ಕರನಾನಂದಕರಂ ಸಮಂತೆಮಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಾ ||

ಈ ಪದ್ಯವಂತೂ ಮಗ್ಗೆಯ ಮಾಯಿದೇವರ ಯಾವ ಶತಕಕ್ಕೂ ಸೇರಿದುದಲ್ಲ. ಹರಿಹರನ ಗಿರಿಜಾಕಲ್ಯಾಣದ[2] ಈ ಪದ್ಯ ಬಹುಶಃ ಆತನ ಶತಕಗಳೊಂದಕ್ಕೆ ಸೇರಿರಬಹುದೆಂದು ಕಾಣುತ್ತದೆ.

ಕರ್ಣಾಟಕ ಕವಿಚರಿತೆಯಲ್ಲಿ ನಿರೂಪಿತವಾಗದೆ ಇರುವ ಕೆಲವು ಶತಕಗಳ ಹೆಸರು ಗುರುನಂಜೇಸ್ವಾಮಿಯ ಶತಕಸಂಕಲನಗಳಲ್ಲಿ ವ್ಯಕ್ತವಾಗಿ ಹೇಳದಿರುವುದರಿಂದ ಆಯಾಯಾ ಅಂಕಿತಗಳಿಂದಲೇ ಅವುಗಳನ್ನು ಕರೆಯಬಹುದೆಂದು ಕಾಣುತ್ತದೆ. ಆ ಅಂಕಿತಗಳುಳ್ಳ ಶತಕಗಳನ್ನು ಆತನು ಉದ್ಧರಿಸಿರುವ ಕ್ರಮದಲ್ಲಿ ಮುಂದೆ ಪಟ್ಟಿ ಮಾಡಿದೆ.

---

1. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸಾಹಿತ್ಯ ಸಮಿತಿಯ ಪ್ರಕಟನೆ ೯
2. ಕಾವ್ಯಕಲಾನಿಧಿ ಮುದ್ರಣ: ಗ್ರಂಥಾಂತ್ಯದ ಸಮಾಪ್ತಿ ಪದ್ಯ: ಆಶ್ವಾಸ ೧೦, ಪದ್ಯ ೧೧೪

1 ಚಂದ್ರಲೇಖಾವತಂಸ
2 ಭವಭಯಂಕರ ಶಂಕರಕಿಂಕರಪ್ರಿಯ
3 ಗುರುಗೊಹೇಶಪ್ರಸಾದಪ್ರಸನ್ನ
4 ಶ್ರೀಮುಕ್ತಿರಾಮೇಶ್ವರ
5 ಶಿವಶಿವ ಶಿವಲಾವಣ್ಯಪುಣ್ಯಾಗ್ರಗಣ್ಯ
6 ಶಿವಗಣಾನಂದಾಬ್ಧಿಚಂದ್ರೋದಯ
7 ಶಂಕರ
8 ಶಂಕರೇಶ್ವರ
9 ಸದಾಶಿವ
10 ತ್ರಿಯಂಬಕ
11 ಸೋಮನಾಥ ಸಲಹೈದಾರಿದ್ರ್ಯವಿದ್ರಾವಣ
12 ಅಂಬಿಕಾಪತಿ
13 ಗುರುಗೊಹೇಶ್ವರ ಸಾಂಪ್ರದಾಯದೊಳ್
14 ಗುರುಗೊಹೇಶ್ವರಪಾದಪಯೋಜಪೂಜಕ
15 ಗುರುಶಾಂತನೆ ಕೊಟ್ಟು ರಕ್ಷಿಸಾ
16 ಮಹೇಶ್ವರ
17 ನಿಜಶಾಂತನಿಷ್ಕಲ
18 ಬರದೂರಪುರಾಧಿಪ ಸಂಗಮೇಶ್ವರ
19 ನಮಃಶಿವಾಯ ಪಂಚಾಕ್ಷರೀವಲ್ಲಭ
20 ನಂಬಿದೆನಾನತ ಕಲ್ಪಭೂಜನಂ

ಈ ಮೇಲಣ ಅಂಕಿತಗಳುಳ್ಳ ಶತಕಗಳಿಂದ ಆರಿಸಿಕೊಂಡಿರುವ ಪದ್ಯಗಳನ್ನು ಉಲ್ಲೇಖಿಸುವ ಮೊದಲು ಕೆಲವು ಶತಕಗಳನ್ನು ಕುರಿತು ವಿಚಾರಮಾಡುವುದಗತ್ಯ. ಶತಕಸಂಕಲನಕಾರನ ಮೊದಲನೆಯ ಶತಕಸಂಕಲನವಾದ 'ಶಿವಕಾರುಣ್ಯಾಹ್ವಾನ ಶತಕ'ದಲ್ಲಿ ಹರಿಹರನ ಉಭಯ ಶತಕಗಳಿಂದಲೂ ಆರಿಸಿದ ಒಂಬತ್ತು ವೃತ್ತಗಳ ಬಳಿಕ ಇರುವ ಪದ್ಯಗಳೆಂದರೆ 'ಚಂದ್ರಲೇಖಾವತಂಸ ಶತಕ'ದ ಪದ್ಯ. ಆ ಅನಂತರ 'ಚಂದ್ರಚೂಡಾಮಣಿ ಶತಕ'ದ ಒಂದು ಪದ್ಯವಿದೆ. ಕಾಲಾನುಕ್ರಮಣಿಕೆಯ ದೃಷ್ಟಿಯಿಂದ ತನ್ನ ಶತಕಸಂಕಲನದಲ್ಲಿನ ಈ ಮೊದಮೊದಲ ಶತಕಗಳು ಇದೇ ಕ್ರಮದಲ್ಲಿ ಹುಟ್ಟಿದುವೆಂಬ ಆತನ ಎಣಿಕೆಯೇ ಈ ಆಯ್ಕೆಯ ಕ್ರಮಕ್ಕೆ ಕಾರಣವೆಂದು ಹೇಳಬಹುದು. ಕನ್ನಡ ಶತಕಕಾರರಲ್ಲಿ ಹರಿಹರನೇ ಮೊತ್ತಮೊದಲನೆಯವನೆಂಬ ಅಭಿಪ್ರಾಯವನ್ನಂತೂ ಈ ಸಂಕಲನಕಾರ ಎತ್ತಿಹಿಡಿದಿದ್ದಾನೆ. 'ಚಂದ್ರಚೂಡಾಮಣಿ ಶತಕ'ದ ಕವಿ ನಾಗವರ್ಮಾಚಾರ್ಯ ಎಂಬ ಬಗ್ಗೆಯೇ ಸಂಶಯವನ್ನು ವ್ಯಕ್ತಪಡಿಸಿ

‘ಆ ಗ್ರಂಥವು ಇಂಥ ಕಾಲದಲ್ಲಿ ಹುಟ್ಟಿತೆಂದು ನಿಶ್ಚಯಿಸಲು ಸಾಧ್ಯವಿಲ್ಲ’ವೆಂದು ಡಾ| ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟಿರುವುದನ್ನಿಲ್ಲಿ ನೆನಪುಮಾಡಿಕೊಳ್ಳಬಹುದಾಗಿದೆ[3]. ಆ ಶತಕದ ಕವಿವಿಷಯಕವಾದ ಅವರ ಸಂಶಯ ಈ ಶತಕ ಸಂಕಲನದ ಆಧಾರದಿಂದ ಸ್ಥಿರಪಟ್ಟಿದೆ. ಅಲ್ಲದೆ ಚಂದ್ರಚೂಡಾಮಣಿಶತಕದ ಸ್ಥೂಲವಾದ ಕಾಲನಿರ್ಣಯಕ್ಕೆ ಒಂದು ಪ್ರಬಲವಾದ ಸಾಧನವೂ ದೊರಕಿದಂತಾಗಿದೆ.

‘ಚಂದ್ರಲೇಖಾವತಂಸ’ ‘ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣ’ ಎಂಬ ಅಂಕಿತಗಳನ್ನುಳ್ಳ ಸಮಗ್ರ ಶತಕಗಳ ತಾಡವೋಲೆ ಪ್ರತಿಗಳು ನಮಗೆ ದೊರಿತಿವೆ. ಅವುಗಳನ್ನು ಕ್ರಮವಾಗಿ ‘ಚಂದ್ರಲೇಖಾವತಂಸ ಶತಕ’ ‘ದಾರಿದ್ರ್ಯವಿದ್ರಾವಣ ಶತಕ’ ಎಂದು ಆಯಾ ಪ್ರತಿಗಳಲ್ಲಿ ನಿರೂಪಿಸಿರುವುದರಿಂದ ಅವುಗಳ ಹೆಸರು ಸ್ಪಷ್ಟವಾದರೂ ಅವುಗಳನ್ನು ರಚಿಸಿದವರಾರೆಂಬುದು ಮಾತ್ರ ತಿಳಿದುಬರುವುದಿಲ್ಲ.

‘ಗುರುಗೊಹೇಶ ಪ್ರಸಾದ ಪ್ರಸನ್ನ’ ‘ಗುರುಗೊಹೇಶ್ವರ ಸಾಂಪ್ರದಾಯದೊಳ್’ ‘ಗುರುಗೊಹೇಶ ಪಾದಪಯೋಜಪೂಜಕಂ’ ಎಂಬ ಅಂಕಿತಗಳುಳ್ಳ ಶತಕಗಳು ಒಬ್ಬನೇ ಕವಿಯ ಬೇರೆ ಬೇರೆ ಶತಕಗಳಾಗಿರಬಹುದೆಂದು ಕಾಣುತ್ತದೆ. ಪ್ರಾಯಶಃ ಈ ಶತಕಕಾರ ಪಾಲ್ಕುರಿಕೆ ಸೋಮನಾಥನ ಕಾಲಕ್ಕೆ ಈಚಿನವನೆಂದು ತೋರುತ್ತದೆ. ಅಲ್ಲಮಪ್ರಭುದೇವರು ತಮ್ಮ ವಚನಗಳಲ್ಲಿ ಬೋಧಿಸಿದ ಪರಮರಹಸ್ಯವನ್ನು ಪಾಲ್ಕುರಿಕೆ ಸೋಮನಾಥನು ಸಂಗಯ್ಯನೆಂಬ ಶರಣನಿಗೆ ಉಪದೇಶಿಸಿದನೆಂದು ತಿಳಿಸುವ ‘ಜ್ಯೋತಿರ್ಮಯ ಶಾಂಭವೀ ಜ್ಞಾನದೀಕ್ಷಾಬೋಧೆ’ಯು ಒಬ್ಬ ‘ಗುರುಗುಹೇಶ್ವರ’ನಿಂದ ರಚಿತವಾದಂತೆ ತಿಳಿದುಬರುತ್ತದೆ[4]. ಆ ದೀಕ್ಷಾಬೋಧೆಯ ಒಂದು ವಚನದಲ್ಲಿ ‘ನಿಜಗುರುಶಾಂತೇಶ್ವರ’ನನ್ನು ನೆನೆದಿರುವುದನ್ನು ನೋಡಬಹುದು[5]. ಈ ಗುಹೇಶ್ವರನೇ ಮೇಲಣ ಈ ಮೂರು ಶತಕಗಳ ಕರ್ತೃವೋ ಏನೋ ತಿಳಿಯದು. ಆದರೆ ‘ನಿಜಗುರುಶಾಂತೇಶ್ವರ’ ಎಂಬ ಅಂಕಿತವುಳ್ಳ ವಚನಕಾರನಿಗಿಂತ ಈ ಗುರುಗುಹೇಶ್ವರ ಈಚಿನವನೆಂದು ಹೇಳಬಹುದು. ಅದೇನೇ ಇರಲಿ ‘ಗುರುಗೊಹೇಶಪ್ರಸಾದಪ್ರಸನ್ನ’ ಶತಕದಿಂದ ಮುಂದೆ ಉದ್ಧೃತವಾಗಿರುವ ಮೊದಲನೆಯ ಪದ್ಯದ ರಚನೆಯನ್ನು ಹರಿಹರನ ಪಂಪಾಶತಕದ ಪದ್ಯರಚನೆಗೆ ಹೋಲಿಸಿದರೆ ನಿಕಟವಾದ ಸಾಮ್ಯವಿದೆಯೆಂಬುದು ವಿದಿತವಾಗುತ್ತದೆ. ಆ ಕಾರಣ ಹರಿಹರನಿಗಿಂತ ಈಚಿನ ಕವಿ ಆ ಶತಕದ ಕರ್ತೃವೆಂಬುದು ಸ್ಪಷ್ಟ.

ಈ ಶತಕಸಂಕಲನಗಳಲ್ಲಿ ಉದ್ಧರಿಸಿರುವ ‘ಶ್ರೀಮುಕ್ತಿರಾಮೇಶ್ವರ’ ‘ಮುಕ್ತಿರಾಮೇಶಲಿಂಗಾ’ ಎಂಬ ಅಂಕಿತಗಳುಳ್ಳ ವೃತ್ತಗಳನ್ನೊಳಕೊಂಡ ಶತಕವು ಕರ್ಣಾಟಕ ಕವಿಚರಿತೆಯಲ್ಲಿ ಉಕ್ತವಾಗಿರುವ ‘ಮುಕ್ತಿರಾಮೇಶ್ವರಶತಕ’ದಿಂದ ಭಿನ್ನ

---

3. ನೋಡಿ :-ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ ಪುಟ ೨೩೭.
4. ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ:, ಚತುರ್ಥ ಸಂಪುಟ, ಪುಟ ೮೯-೯೦.
5. ಸದ್ಧರ್ಮ ಗ್ರಂಥಮಾಲೆ ೧೫, ಪುಟ ೨೧.

ವಾದುದು. 'ಮುಕ್ತಿರಾಮೇಶ್ವರನೇ' ಎಂಬ ಅಂಕಿತವಿರುವ ಕಂದಗಳು ಅವು ದಾದರೂ ಒಂದು ಶತಕಕ್ಕೆ ಸೇರಿದ್ದರೂ ಇರಬಹುದೆಂದೂ ಅವುಗಳ ರಚನಾಕಾಲ ಸುಮಾರು 1700 ಎಂದೂ ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ. 'ನೀತಿಸಾರ' ವೆಂಬ ಗ್ರಂಥದಿಂದ ನಮಗೆ ದೊರೆತಿರುವ ಕೆಲವು ಕಂದಗಳನ್ನು ಇಲ್ಲಿ ಉದಾಹರಿಸ ಬಹುದಾಗಿದೆ :—

ನಂಬುಗೆಯಿಲ್ಲದೆ ತಿರಿಗುವ । ಡಂಬಕರಿಗೆ ಕಲ್ಲಿನಂತೆ ತೋಱುವನಲ್ಲದೆ
ನಂಬಿದರೆ ಕಲ್ಪವೃಕ್ಷದ । ಕೊಂಬೆಂ ದಡಿತಿಹುದು ಮುಕ್ತಿರಾಮೇಶ್ವರನೇ ॥
ಸಾವಂ ಬಲ್ಲರು ತಾವುಂ । ಸಾವುದ ಕಣ್ಣಾರೆ ಕಂಡುಂಬಲ್ಲರೆ ಮತ್ತಾ
ಸಾವುದನಱಿಯರು ಪಾಪಕೆ । ಹೇವರಿಸರು ನರರು ಮುಕ್ತಿರಾಮೇಶ್ವರನೇ ॥
ಚೀಟ ನೃಪನೀಯನಿತ್ತರೆ । ನಾಟದು ನಾಟದರೆ ವೆಚ್ಚಕೊದಗದು ವೊದಗ
ಲ್ವೇಟಿಗೆ ಸಲ್ಲದು ಸಂಸಾರದ । ಕೋಟಲೆ ಘನವೆನಗೆ ಮುಕ್ತಿರಾಮೇಶ್ವರನೇ॥
ಸ್ವಾಮಿಯಱಿದಡೇನಱಿಯದೆ । ತಾಮಸದಿಂದಿದ್ದಡೇನು ಹಿತತಪ್ಪದೆ ನಿ
ಸ್ಸೀಮದಲಿ ನಡೆವ ಭೃತ್ಯಗೆ । ನೀ ಮೆಚ್ಚದೆಮಾಣೆ ಮುಕ್ತಿರಾಮೇಶ್ವರನೇ ॥

ಸರಳವಾದ ಈ ಕಂದಗಳಿಗೂ 'ಶ್ರೀಮುಕ್ತಿರಾಮೇಶ್ವರಶತಕ' ದ ವೃತ್ತಗಳಿಗೂ ಯಾವ ಸಾಮ್ಯವೂ ಇಲ್ಲ. ಆದರೆ ಗುರುನಂಜೇಸ್ವಾಮಿಯ ಶತಕಸಂಕಲನಗಳಲ್ಲಿರುವ 'ಶಂಕರಾ' 'ಶಂಕರೇಶಾ' ಎಂಬ ಅಂಕಿತಗಳಿರುವ ವೃತ್ತಗಳನ್ನು 'ಶಂಕರ' 'ಶಂಕರೇಶ' 'ಶಂಕರಲಿಂಗ' 'ಪ್ರಸನ್ನಶಂಕರಲಿಂಗ' ಎಂಬ ಅಂಕಿತಗಳನ್ನೊಳಗೊಂಡ ಕಂದಗ ಳೊಡನೆ ಹೋಲಿಸಿದರೆ ಭಾಷೆ, ಭಾವ, ಭಕ್ತಿಯ ಆವೇಶಗಳ ದೃಷ್ಟಿಯಿಂದ ಹೋಲಿಕೆ ಎದ್ದು ತೋರುತ್ತದೆ. ಈ ಕಂದಗಳ ಕರ್ತೃವಾದ ಶಂಕರದೇವರೇ 'ಶಂಕರಾ' 'ಶಂಕರೇಶ' ಎಂಬ ಅಂಕಿತಗುಳ್ಳ ಶತಕಗಳ ಕರ್ತೃವೆಂದು ದೃಢವಾಗಿ ಹೇಳಬಹುದು. ಈ ಉಭಯ ಅಂಕಿತಗಳ ವೃತ್ತಗಳು ಆತನ ಪ್ರತ್ಯೇಕವಾದ ಎರಡು ಶತಕಗಳಿಗೆ ಸೇರಿದವುಗಳೆಂದು ತೋರುತ್ತವೆ. ಈ ಶತಕಗಳು ಶಂಕರದೇವರ 'ಗುರುಶಂಕರೇಶ್ವರ ಶತಕ' ದಿಂದ ಭಿನ್ನವಾದುವು. ಆ ಕಾರಣ ಈತನಕ ಅಜ್ಞಾತವಾಗಿದ್ದ ಶಂಕರದೇವರ ಈ ಬೇರೆ ಎರಡು ಶತಕಗಳ ಅಸ್ತಿತ್ವವನ್ನು ಗುರುನಂಜೇಸ್ವಾಮಿಯ ಶತಕಸಂಕಲನ ಗಳು ವ್ಯಕ್ತಪಡಿಸಿದಂತಾಗಿವೆ. ಶಂಕರದೇವರ ಈ ಶತಕಗಳ ಕಾಲ ಸು 1430 ಎಂದು ಹೇಳಬಹುದು.[6]

'ಕೀರ್ತಿಶತಕ'ದ ಸಂಕಲನದಲ್ಲಿ ಕಂಡುಬರುವ 'ಸದಾಶಿವ' ಎಂಬ ಅಂಕಿತವುಳ್ಳ ಶತಕದ ವೃತ್ತವೊಂದರಲ್ಲಿ 'ಸಿದ್ಧಸೋಮೇಶಮಹೇಶ'ನನ್ನು ಆ ಶತಕದ ಕರ್ತೃ ನೆನೆದಿರುವುದನ್ನು ಕಾಣಬಹುದು. ಸಾನಂದ ಗಣೇಶ್ವರನ ರಗಳೆಯ ಕರ್ತೃವಾದ

6. ನೋಡಿ :-ಇದೇ ಸಂಪಾದಕನಿಂದ ಸಂಶೋಧಿತವಾಗಿ ಪ್ರಪ್ರಥಮವಾಗಿ ಮುದ್ರಿತವಾದ ಚೆನ್ನಂಜೇದೇವರು ಸಂಪಾದಿಸಿದ ಶಂಕರದೇವರ ಕಂದದ ಪೀಠಿಕೆ.

'ಆ ಗ್ರಂಥವು ಇಂಥ ಕಾಲದಲ್ಲಿ ಹುಟ್ಟಿತೆಂದು ನಿಶ್ಚಯಿಸಲು ಸಾಧ್ಯವಿಲ್ಲ'ವೆಂದು ಡಾ| ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟಿರುವುದನ್ನಿಲ್ಲಿ ನೆನಪುಮಾಡಿ ಕೊಳ್ಳಬಹುದಾಗಿದೆ[3]. ಆ ಶತಕದ ಕವಿವಿಷಯಕವಾದ ಅವರ ಸಂಶಯ ಈ ಶತಕ ಸಂಕಲನದ ಆಧಾರದಿಂದ ಸ್ಥಿರಪಟ್ಟಿದೆ. ಅಲ್ಲದೆ ಚಂದ್ರಚೂಡಾಮಣಿಶತಕದ ಸ್ಥೂಲ ವಾದ ಕಾಲನಿರ್ಣಯಕ್ಕೆ ಒಂದು ಪ್ರಬಲವಾದ ಸಾಧನವೂ ದೊರಕಿದಂತಾಗಿದೆ.

'ಚಂದ್ರಲೇಖಾವತಂಸ' 'ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣ' ಎಂಬ ಅಂಕಿತಗಳನ್ನುಳ್ಳ ಸಮಗ್ರ ಶತಕಗಳ ತಾಡವೋಲೆ ಪ್ರತಿಗಳು ನಮಗೆ ದೊರೆ ತಿವೆ. ಅವುಗಳನ್ನು ಕ್ರಮವಾಗಿ 'ಚಂದ್ರಲೇಖಾವತಂಸ ಶತಕ' 'ದಾರಿದ್ರ್ಯವಿದ್ರಾ ವಣ ಶತಕ' ಎಂದು ಆಯಾ ಪ್ರತಿಗಳಲ್ಲಿ ನಿರೂಪಿಸಿರುವುದರಿಂದ ಅವುಗಳ ಹೆಸರು ಸ್ಪಷ್ಟವಾದರೂ ಅವುಗಳನ್ನು ರಚಿಸಿದವರಾರೆಂಬುದು ಮಾತ್ರ ತಿಳಿದುಬರುವುದಿಲ್ಲ.

'ಗುರುಗೊಹೇಶ ಪ್ರಸಾದ ಪ್ರಸನ್ನ' 'ಗುರುಗೊಹೇಶ್ವರ ಸಾಂಪ್ರದಾಯ ದೊಳ್' 'ಗುರುಗೊಹೇಶ ಪಾದಪಯೋಜಪೂಜಕಂ' ಎಂಬ ಅಂಕಿತಗಳುಳ್ಳ ಶತಕ ಗಳು ಒಬ್ಬನೇ ಕವಿಯ ಬೇರೆ ಬೇರೆ ಶತಕಗಳಾಗಿರಬಹುದೆಂದು ಕಾಣುತ್ತದೆ. ಪ್ರಾಯಶಃ ಈ ಶತಕಕಾರ ಪಾಲ್ಕುರಿಕೆ ಸೋಮನಾಥನ ಕಾಲಕ್ಕೆ ಈಚಿನವನೆಂದು ತೋರುತ್ತದೆ. ಅಲ್ಲಮಪ್ರಭುದೇವರು ತಮ್ಮ ವಚನಗಳಲ್ಲಿ ಬೋಧಿಸಿದ ಪರಮರಹಸ್ಯ ವನ್ನು ಪಾಲ್ಕುರಿಕೆ ಸೋಮನಾಥನು ಸಂಗಯ್ಯನೆಂಬ ಶರಣನಿಗೆ ಉಪದೇಶಿಸಿದನೆಂದು ತಿಳಿಸುವ 'ಜ್ಯೋತಿರ್ಮಯ ಶಾಂಭವೀ ಜ್ಞಾನದೀಕ್ಷಾಬೋಧೆ'ಯು ಒಬ್ಬ 'ಗುರುಗುಹೇಶ್ವರ'ನಿಂದ ರಚಿತವಾದಂತೆ ತಿಳಿದುಬರುತ್ತದೆ[4]. ಆ ದೀಕ್ಷಾಬೋಧೆಯ ಒಂದು ವಚನದಲ್ಲಿ 'ನಿಜಗುರುಶಾಂತೇಶ್ವರ'ನನ್ನು ನೆನೆದಿರುವುದನ್ನು ನೋಡ ಬಹುದು[5]. ಈ ಗುಹೇಶ್ವರನೇ ಮೇಲಣ ಈ ಮೂರು ಶತಕಗಳ ಕರ್ತೃವೋ ಏನೋ ತಿಳಿಯದು. ಆದರೆ 'ನಿಜಗುರುಶಾಂತೇಶ್ವರ' ಎಂಬ ಅಂಕಿತವುಳ್ಳ ವಚನಕಾರನಿಗಿಂತ ಈ ಗುರುಗುಹೇಶ್ವರ ಈಚಿನವನೆಂದು ಹೇಳಬಹುದು. ಅದೇನೇ ಇರಲಿ 'ಗುರು ಗೊಹೇಶಪ್ರಸಾದಪ್ರಸನ್ನ' ಶತಕದಿಂದ ಮುಂದೆ ಉದ್ಧೃತವಾಗಿರುವ ಮೊದಲನೆಯ ಪದ್ಯದ ರಚನೆಯನ್ನು ಹರಿಹರನ ಪಂಪಾಶತಕದ ಪದ್ಯರಚನೆಗೆ ಹೋಲಿಸಿದರೆ ನಿಕಟ ವಾದ ಸಾಮ್ಯವಿದೆಯೆಂಬುದು ವಿದಿತವಾಗುತ್ತದೆ. ಆ ಕಾರಣ ಹರಿಹರನಿಗಿಂತ ಈಚಿನ ಕವಿ ಆ ಶತಕದ ಕರ್ತೃವೆಂಬುದು ಸ್ಪಷ್ಟ.

ಈ ಶತಕಸಂಕಲನಗಳಲ್ಲಿ ಉದ್ಧರಿಸಿರುವ 'ಶ್ರೀಮುಕ್ತಿರಾಮೇಶ್ವರ' 'ಮುಕ್ತಿ ರಾಮೇಶಲಿಂಗಾ' ಎಂಬ ಅಂಕಿತಗಳುಳ್ಳ ವೃತ್ತಗಳನ್ನೊಳಕೊಂಡ ಶತಕವು ಕರ್ಣಾ ಟಕ ಕವಿಚರಿತೆಯಲ್ಲಿ ಉಕ್ತವಾಗಿರುವ 'ಮುಕ್ತಿರಾಮೇಶ್ವರಶತಕ'ದಿಂದ ಭಿನ್ನ

3. ನೋಡಿ :-ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ ಪುಟ ೨೩೭.
4. ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚೀ, ಚತುರ್ಥ ಸಂಪುಟ, ಪುಟ ೬೯-೭೦.
5. ಸದ್ಧರ್ಮ ಗ್ರಂಥಮಾಲೆ ೧೫, ಪುಟ ೨೧.

ವಾದುದು. 'ಮುಕ್ತಿರಾಮೇಶ್ವರನೇ' ಎಂಬ ಅಂಕಿತವಿರುವ ಕಂದಗಳು ಅವು ದಾದರೂ ಒಂದು ಶತಕಕ್ಕೆ ಸೇರಿದ್ದರೂ ಇರಬಹುದೆಂದೂ ಅವುಗಳ ರಚನಾಕಾಲ ಸುಮಾರು 1700 ಎಂದೂ ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ. 'ನೀತಿಸಾರ' ವೆಂಬ ಗ್ರಂಥದಿಂದ ನಮಗೆ ದೊರೆತಿರುವ ಕೆಲವು ಕಂದಗಳನ್ನು ಇಲ್ಲಿ ಉದಾಹರಿಸ ಬಹುದಾಗಿದೆ :—

ನಂಬುಗೆಯಿಲ್ಲದೆ ತಿರಿಗುವ। ಡಂಬಕರಿಗೆ ಕಲ್ಲಿನಂತೆ ತೋಱುವನಲ್ಲದೆ
ನಂಬಿದರೆ ಕಲ್ಪವೃಕ್ಷದ। ಕೊಂಬೇಂ ದಡಿತಿಹುದು ಮುಕ್ತಿರಾಮೇಶ್ವರನೇ॥
ಸಾವಂ ಬಲ್ಲರು ತಾವುಂ। ಸಾವುದ ಕಣ್ಣಾರೆ ಕಂಡುಂಬಲ್ಲರೆ ಮತ್ತಾ
ಸಾವುದನಱಿಯರು ಪಾಪಕೆ। ಹೇವರಿಸರು ನರರು ಮುಕ್ತಿರಾಮೇಶ್ವರನೇ॥
ಚೀಟ ನೃಪನೀಯನಿತ್ತರೆ। ನಾಟದು ನಾಟದರೆ ವೆಚ್ಚಕೊದಗದು ವೊದಗ
ಲ್ವೇಟೆಗೆ ಸಲ್ಲದು ಸಂಸಾರದ। ಕೋಟಲೆ ಘನವೆನಗೆ ಮುಕ್ತಿರಾಮೇಶ್ವರನೇ॥
ಸ್ವಾಮಿಯಱಿದಡೇನಱಿಯದೆ। ತಾಮಸದಿಂದಿದ್ದಡೇನು ಹಿತತಪ್ಪದೆ ನಿ
ಸ್ಸೀಮದಲಿ ನಡೆವ ಭೃತ್ಯಗೆ। ನೀ ಮೆಚ್ಚದೆಮಾಣೆ ಮುಕ್ತಿರಾಮೇಶ್ವರನೇ॥

ಸರಳವಾದ ಈ ಕಂದಗಳಿಗೂ 'ಶ್ರೀಮುಕ್ತಿರಾಮೇಶ್ವರಶತಕ' ದ ವೃತ್ತಗಳಿಗೂ ಯಾವ ಸಾಮ್ಯವೂ ಇಲ್ಲ. ಆದರೆ ಗುರುನಂಜೇಸ್ವಾಮಿಯ ಶತಕಸಂಕಲನಗಳಲ್ಲಿರುವ 'ಶಂಕರಾ' 'ಶಂಕರೇಶಾ' ಎಂಬ ಅಂಕಿತಗಳಿರುವ ವೃತ್ತಗಳನ್ನು 'ಶಂಕರ' 'ಶಂಕರೇಶ' 'ಶಂಕರಲಿಂಗ' 'ಪ್ರಸನ್ನಶಂಕರಲಿಂಗ' ಎಂಬ ಅಂಕಿತಗಳನ್ನೊಳಗೊಂಡ ಕಂದಗ ಳೊಡನೆ ಹೋಲಿಸಿದರೆ ಭಾಷೆ, ಭಾವ, ಭಕ್ತಿಯ ಆವೇಶಗಳ ದೃಷ್ಟಿಯಿಂದ ಹೋಲಿಕೆ ಎದ್ದು ತೋರುತ್ತದೆ. ಈ ಕಂದಗಳ ಕರ್ತೃವಾದ ಶಂಕರದೇವರೇ 'ಶಂಕರಾ' 'ಶಂಕರೇಶ' ಎಂಬ ಅಂಕಿತಗುಳ್ಳ ಶತಕಗಳ ಕರ್ತೃವೆಂದು ದೃಢವಾಗಿ ಹೇಳಬಹುದು. ಈ ಉಭಯ ಅಂಕಿತಗಳ ವೃತ್ತಗಳು ಆತನ ಪ್ರತ್ಯೇಕವಾದ ಎರಡು ಶತಕಗಳಿಗೆ ಸೇರಿದವುಗಳೆಂದು ತೋರುತ್ತವೆ. ಈ ಶತಕಗಳು ಶಂಕರದೇವರ 'ಗುರುಶಂಕರೇಶ್ವರ ಶತಕ' ದಿಂದ ಭಿನ್ನವಾದುವು. ಆ ಕಾರಣ ಈತನಕ ಅಜ್ಞಾತವಾಗಿದ್ದ ಶಂಕರದೇವರ ಈ ಬೇರೆ ಎರಡು ಶತಕಗಳ ಅಸ್ತಿತ್ವವನ್ನು ಗುರುನಂಜೇಸ್ವಾಮಿಯ ಶತಕಸಂಕಲನ ಗಳು ವ್ಯಕ್ತಪಡಿಸಿದಂತಾಗಿವೆ. ಶಂಕರದೇವರ ಈ ಶತಕಗಳ ಕಾಲ ಸು 1430 ಎಂದು ಹೇಳಬಹುದು.[6]

'ಕೀರ್ತಿಶತಕ'ದ ಸಂಕಲನದಲ್ಲಿ ಕಂಡುಬರುವ 'ಸದಾಶಿವ' ಎಂಬ ಅಂಕಿತವುಳ್ಳ ಶತಕದ ವೃತ್ತವೊಂದರಲ್ಲಿ 'ಸಿದ್ಧಸೋಮೇಶಮಹೇಶ'ನನ್ನು ಆ ಶತಕದ ಕರ್ತೃ ನೆನೆದಿರುವುದನ್ನು ಕಾಣಬಹುದು. ಸಾನಂದ ಗಣೇಶ್ವರನ ರಗಳೆಯ ಕರ್ತೃವಾದ

6. ನೋಡಿ :-ಇದೇ ಸಂಪಾದಕನಿಂದ ಸಂಶೋಧಿತವಾಗಿ ಪ್ರಪ್ರಥಮವಾಗಿ ಮುದ್ರಿತವಾದ ಚೆನ್ನಂಜೇದೇವರು ಸಂಪಾದಿಸಿದ ಶಂಕರದೇವರ ಕಂದದ ಪೀಠಿಕೆ.

'ಸಧಾಶಿವ' ಎಂಬ ಅಂಕಿತವುಳ್ಳ ಕವಿಯು ಸುಮಾರು 1350 ರಲ್ಲಿದ್ದಿರ ಬಹುದೆಂದು ಪ್ರೊಫೆಸರ್ ಡಿ.ಎಲ್. ನರಸಿಂಹಾಚಾರ್ಯರು ಅಭಿಪ್ರಾಯ ಪಡುತ್ತಾರೆ[7]. ಆ ರಗಳೆಯ ಕವಿಯೇ ಈ ಶತಕಕಾರನಾಗಿದ್ದರೂ ಇರಬಹುದು. 'ಸಿದ್ಧ ಸೋಮೇಶ' ಎಂಬ ಅಂಕಿತ ವುಳ್ಳ ವಚನಕಾರ ಈ ಶತಕಕಾರನಿಗಿಂತ ಹಿಂದಿನವನಾಗಿರಬಹುದೆಂದು ಕಾಣುತ್ತದೆ. ಕರ್ಣಾಟಕ ಕವಿಚರಿತೆಯಲ್ಲಿ[8] ಉಕ್ತವಾಗಿರುವ ಶಾಲ್ಯದ ಕೃಷ್ಣರಾಜನ (1748) 'ಸದಾಶಿವಶತಕ' ದಿಂದ ಈ 'ಸದಾಶಿವಶತಕ' ಭಿನ್ನವಾದುದೆಂದು ಬೇರೆ ಹೇಳ ಬೇಕಾದುದಿಲ್ಲ.

ಕವಿಚರಿತೆಯ ಅನುಬಂಧದ ಅನುಕ್ತ ಗ್ರಂಥಗಳ ಪಟ್ಟಿಯಲ್ಲಿ[9] ಹೆಸರಿಸಿರುವ 'ನಿಸ್ಕಲ ಶತಕ' ಮತ್ತು 'ಸಂಗಮೇಶ್ವರ ಶತಕ' —ಇವು ಕ್ರಮವಾಗಿ ಬಹುಶಃ 'ನಿಜಶಾಂತನಿಷ್ಕಳ' 'ಬರದೂರಪುರಾಧಿಪ ಸಂಗಮೇಶ್ವರ' ಎಂಬ ಅಂಕಿತಗಳನ್ನುಳ್ಳ ಶತಕಗಳಾಗಿದ್ದರೂ ಇರಬಹುದು. ಆದರೆ ಈಗ ಆ ಶತಕಗಳ ಪ್ರತಿಗಳು ನಮಗೆ ದೊರೆಯದಿರುವುದರಿಂದ ನಿಶ್ಚಯಿಸಿ ಹೇಳುವಂತಿಲ್ಲ.

'ಗುರುಶಾಂತನೆ ಕೊಟ್ಟು ರಕ್ಷಿಸಾ' ಎಂಬ ಅಂಕಿತವುಳ್ಳ ಶತಕ ಸು 1430ರಲ್ಲಿ ಹುಟ್ಟಿರಬಹುದೆಂದು ಊಹಿಸುತ್ತೇನೆ. ಕರಸ್ಥಲದ ವೀರಣ್ಣೊಡೆಯ ಕೆಲವು ಕಂದ ಗಳನ್ನು ರಚಿಸಿದ್ದಾನೆ. ಆತನ ಶಿಷ್ಯನಾದ ಕರಸ್ಥಲದ ನಾಗಿದೇವಕವಿ ತ್ರಿವಿಧಿ ಯೊಂದನ್ನು ಬರೆದಿದ್ದಾನೆ. ಈ ಇಬ್ಬರೂ ಒಬ್ಬ 'ಗುರುಶಾಂತ'ನನ್ನು ತಮ್ಮ ಕೃತಿ ಗಳಲ್ಲಿ ಸ್ಮರಿಸಿದ್ದಾರೆ. ಈ 'ಗುರುಶಾಂತ'ನ ಅಂಕಿತವನ್ನೇ ಮೇಲಿನ ಶತಕಕಾರ ಬಳಸಿರುವನೆಂದು ಕಾಣುತ್ತದೆ.

ಶಿವಕಾರುಣ್ಯ, ಶಿವಲಿಂಗವಿಕಳತೆ, ಸನ್ನಿದರ್ಶನ, ಅರ್ಜನ, ಪೂಜನ ಮತ್ತು ಸಂಕೀರ್ತನ ಭಾಗಗಳನ್ನುಳ್ಳ ಪ್ರಾಚೀನ ಶತಕಗಳ ಪದ್ಯಗಳನ್ನು ಆರಿಸಿಕೊಂಡು ಶತಕ ರೂಪದಿಂದಲೇ ಸಂಕಲನ ಮಾಡಿರುವ ಗುರುನಂಜೇಸ್ವಾಮಿಯ ಕಾಲ, ದೇಶಗಳ ಬಗ್ಗೆ ವಿಚಾರ ಮಾಡುವುದಗತ್ಯ. 'ಬರೆಹದ ಗುರುನಂಜೇಸ್ವಾಮಿ' ಸೇರಿಸಿದ ಶತಕವೆಂದು ಈ ಸಂಕಲಿತ ಶತಕಗಳ ಆದಿಯಲ್ಲಿ ವ್ಯಕ್ತವಾಗಿ ಹೇಳಿದೆ. ಇಷ್ಟು ಹೊರತು ಆತನ ವಿಷಯಕವಾದ ಹೆಚ್ಚಿನ ಸಂಗತಿಯೇನೂ ಆ ಗ್ರಂಥದಿಂದ ತಿಳಿದು ಬರುವುದಿಲ್ಲ. ಆ ಶತಕಗಳನ್ನು ಪ್ರತಿಮಾಡಿದ ಕಾಲವಾವುದೆಂಬುದೂ ಅದರಲ್ಲಿ ನಿರೂಪಿತವಾಗಿಲ್ಲ. ಪ್ರತಿ ಕಾರನು ಶಕಟರೇಫವನ್ನು ಬಳಸಿರುವುದು ಮಾತ್ರ ಕಂಡುಬರುತ್ತದೆ.

ಬರೆಹದ ಗುರುನಂಜೇಸ್ವಾಮಿಯು ತನ್ನ ಶತಕಸಂಕಲನಗಳಲ್ಲಿ ವೀರಭದ್ರರಾಜನ ಶತಕಗಳನ್ನು ಸೇರಿಸಿರುವುದರಿಂದ ಆತನ ಕಾಲಕ್ಕಿಂತ ಎಂದರೆ ಸು 1530 ಕ್ಕಿಂತ ಈಚಿನವನೆಂಬುದು ಸ್ಪಷ್ಟವಾಗಿದೆ. ಉಮಾಸ್ತೋತ್ರ ಷಟ್ಪದ ಅಥವಾ ತ್ರಿಪುರ

7. ಪ್ರಬುದ್ಧ ಕರ್ಣಾಟಕ ಸಂಪುಟ ೧೭ ಸಂಚಿಕೆ ೪.
8. ಕ. ಕ. ಚ. ಸಂಪುಟ III, ಪುಟ ೧೨೫; ೯ ಅದೇ ಪುಟ ೪೨೪, ೪೩೨.

ಸುಂದರೀಸ್ತೋತ್ರ, 'ಅಷ್ಟಾವರಣ ಸ್ತೋತ್ರ ಷಟ್ಪದ' ಎಂಬ ಗ್ರಂಥಗಳು ದೊರೆಯುತ್ತವೆ. ಇವು ಭಟ್ಟಭಾಸ್ಕರ ವಿರಚಿತ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕನ್ನು ಬರೆದ ಗುರುನಂಜ ಕವಿಯಿಂದಲೇ ಸಂಕಲಿತ ವಾಗಿರಬಹುದೋ ಏನೊ ತಿಳಿಯದು ಎಂದು ಕವಿ ಚರಿತಕಾರರು ಅಭಿಪ್ರಾಯಪಟ್ಟು ಆ ವ್ಯಾಖ್ಯಾನಕಾರನ ಕಾಲವನ್ನು ಸು 1500 ಆಗಿರಬಹುದೆಂದು[10] ಊಹಿಸಿದ್ದಾರೆ. ಸ್ತೋತ್ರಷಟ್ಪದಗಳನ್ನು ಸೇರಿಸಿದ 'ಗುರುನಂಜೇಸ್ವಾಮಿ'ಯೂ ಶತಕಸಂಕಲನಕಾರನಾದ ಬರೆಹದ 'ಗುರುನಂಜೇಸ್ವಾಮಿ'ಯೂ ಅಭಿನ್ನವ್ಯಕ್ತಿಯೆಂದು ನಾಮಸಾದೃಶ್ಯ ಹಾಗು ಸಂಪಾದನೆಯ ಸಮಯ ಸಾದೃಶ್ಯದಿಂದ ಹೇಳಬಹುದಾಗಿದೆ. ವ್ಯಾಖ್ಯಾನಕಾರನೂ, ಸಿದ್ಧಲಿಂಗನ ಶಿಷ್ಯನೂ ಆದ ಮೂಗೂರಿನ 'ಗುರುನಂಜ'ನು ಸಿದ್ಧಲಿಂಗೇಶನ ಶಿಷ್ಯನಾದ ಹುಲ್ಲಳ್ಳಿಯ ವೀರಣಾರಾಧ್ಯನ (ಸು1620) ಸಮಕಾಲಿಕನೆಂದು ಕಂಡುಬರುತ್ತದೆ. ಈ ವ್ಯಾಖ್ಯಾನಕಾರ ಗುರುನಂಜನೇ ತ್ರಿಪುರಸುಂದರೀಸ್ತೋತ್ರ ಇತ್ಯಾದಿಗಳನ್ನು ಸೇರಿಸಿದ ಪ್ರಕೃತ ಬರೆಹದ ಗುರುನಂಜೇಸ್ವಾಮಿಯಾಗಿರಬೇಕೆಂದು ತೋರುವುದರಿಂದ ಈತನಕಾಲ ಸು 1620 ಎಂದು ಹೇಳಬಹುದು.

ಗುರುನಂಜೇಸ್ವಾಮಿಯ ಸಂಕಲಿತ ತತಕಗಳಿಂದ ಕೆಲವು ಪದ್ಯಗಳನ್ನು ಉಲ್ಲೇಖಿಸುವ ಮೂಲಕ ಅವುಗಳ ಲಘು ಪರಿಚಯವನ್ನಿಲ್ಲಿ ಮಾಡಿಕೊಡಬಹುದಾಗಿದೆ. ಆಯಾ ಶತಕಗಳ ಮುಂದೆ ಕೊಟ್ಟಿರುವ ಕಾಲವನ್ನು ಊಹಿಸಿ ಸೂಚಿಸಲಾಗಿದೆ. ಇವುಗಳ ಜೊತೆಗೆ ಕರ್ಣಾಟಕ ಕವಿಚರಿತೆಯಲ್ಲಿ ನಿರೂಪಿತವಾಗದೆ ನಮಗೆ ದೊರೆತ ಚೆನ್ನಾರ್ಯ ಅಥವಾ ಚೆನ್ನವೀರ ದೇಶಿಕ ವಿರಚಿತ ಅಷ್ಟಾವರಣ ಮಣಿದರ್ಪಣಶತಕ ಮತ್ತು ಈಶ್ವರ ಓಲಗಶತಕ ಅಥವಾ ಮಲ್ಲಿಕಾರ್ಜುನಕ್ಷೇತ್ರ ಮಾಹಾತ್ಮ್ಯ ಎಂಬ ಎರಡು ಸ್ವತಂತ್ರಶತಕ[11]ಗಳಿಂದಲೂ ಗೌರಪಾಚಾರ್ಯ ಬಸವಾಂಕವಿರಚಿತ ಕಲ್ಯಾಣ ಶತಕ[12]ದಿಂದಲೂ ಕೆಲವು ಪದ್ಯಗಳನ್ನು ಉಲ್ಲೇಖಿಸಲಾಗಿದೆ. ಬಸವಾಂಕನ ಕಲ್ಯಾಣ ಶತಕ ಭಕ್ತಿ ಜ್ಞಾನವೈರಾಗ್ಯ ಬೋಧಕವಾದರೂ ಶೃಂಗಾರಗರ್ಭೀಕೃತವಾದ ಶತಕ. ಈ ಶತಕದ ಉಲ್ಲೇಖನದಿಂದ ಈ ಅಧ್ಯಾಯ ಮುಂದೆ ಪರಿಸಮಾಪ್ತವಾಗುತ್ತದೆ.

### ೧ ಚಂದ್ರಲೇಖಾವತಂಸ ಶತಕ (ಸು ೧೩೦೦)

ಶ್ರೀಮನ್ನಾಗಾಧಿನಾಥ ಪ್ರವಿಮಳಯಜಿನಾವಾಸ ನಿತ್ಯಪ್ರಕಾಶಂ
ಶ್ರೀಮನ್ನಾಗೇಂದ್ರಕರ್ಣಾಭರಣ ಶರಣಸಂತಾನ ಗಾನಪ್ರವೀಣಂ
ಶ್ರೀಮನ್ನಾಗಾಸ್ಯತಾತಂ ನತಜನ ಹೃದಯಾಂಭೋಜ ಪಂಕೇಜಮಿತ್ರಂ
ಶ್ರೀಮನ್ನಾಗೇಶತಲ್ಪಪ್ರಿಯ ಶರಣಾಗು ನೀಂ ಚಂದ್ರಲೇಖಾವತಂಸಾ॥

---

10. ಕ. ಕ. ಚ. II, ಪುಟ ೧೩೭-೮.

11, 12, ನೋಡಿ:- The unknown pages in the History of Kannada Literature-I by C. Mahadevappa.

ಲಯದಿಂದಂ ಮುಂದುಗೆಟ್ಟಿಂ ಸ್ಥಿತಿಯೊಳು ಹೊಡೆಹುಲ್ಲಾದೆನುತ್ಪತ್ತಿಯೊಳ್ನಿ
ಶ್ಚಯಮಂ ಹೋಗಾಡಿ ನಾನಾಭವರುಜೆಯೊಳು ಬಿದ್ದೆಂ ತೊಳಲ್ದೆಂ ಬಳಲ್ದೆಂ
ಭಯಬಟ್ಟೆಂ ಬಾಯಬಿಟ್ಟೆಂ ಅಕಟ ಕುದುರೆ ಬೀಳ್ವನ್ನೆಕಂ ತಂದೆ ವೈಹಾ
ಳಿಯೆ ಹೇಳಾಯೆನ್ನ ನೀಂ ಕಾಡಿಸಿ ದಣಿಯೆಯದೇಂ ಚಂದ್ರಲೇಖಾವತಂಸಾ॥

ಶಿವದೋ ಯೆಂದಾತ್ರಿಲೋಕಂ ಮಱುಕಿಯೊಗೆ ಮಿಗೆ ಹಿಂದಿಕ್ಕಿಕೊಂಡೆಲ್ಲರಂ ನುಂ
ಗುವ ಹಾಲಾಹಲಮಂ ಕಂಠದೊಳು ಧರಿಸಿಕೊಂಡೆಯ್ದೆ ಮೂದೇವರಂ ಕಾ
ಯ್ದು ವಿಷಗ್ರೀವಂ ಮಹಾದೇವನೆನಿಸಿಕೊಳುತಂ ಕಾಲಕಾಮಂಗೆ ನೀ ನಿ
ನ್ನವರಂ ಕೈಯ್ಯೊಪ್ಪಿಸಲ್ ಮೂಜಗಂ ನಗದಿಹುದೇ ಚಂದ್ರಲೇಖಾವತಂಸಾ॥

೨ ಶಂಕರಕಿಂಕರಪ್ರಿಯ ಶತಕ (ಸು. ೧೭೫೦)

ಬೆದರಿಸಿ ಬೇನಸಂಬಡಿಸಿ ಬೆಂಬಿಡದೆಯ್ದೆ ವಿಡಂಬಿಸುತ್ತ ಸು
ತ್ತಿದ ಭವಪಾಶಮಂ ಪರಿದು ಪಾಲಿಸಬಲ್ಲ ಸಮರ್ಥರಿಲ್ಲವೆಂ
ಬುದನಱಿದೀಗ ನಿಮ್ಮ ಮಱುಕಿಯೊಕ್ಕನ ಮೆಣ್ದೆಲುಕಾಯಿ ದೇವ ನಂ
ಬಿದೆ ಸಲೆ ನಂಬಿದೆಂ ಭವಭಯಂಕರ ಶಂಕರಕಿಂಕರಪ್ರಿಯಾ॥

ಅಣಲೊಳುಬಿದ್ದ ಗೋವಿನವೊಲ್ಕೈದೆನೆ ಜೇಗದಿ ದೇವ ನೀವೆ ಬಂ
ಡೆಣೆಸದಿರೆಂದು ಮಸ್ತಕದ ಮೇಲೆ ಸವಿಸ್ತರಮಾದ ಹಸ್ತಮಂ
ಪ್ರಣಯದೊಳಿಟ್ಟು ಪಾಲಿಸಿದೊಡೆನ್ನವೊಲಾರ್ ಕೃತಕೃತ್ಯಮಾನಸರ್
ಗಣಿಸೆ ಧರಿತ್ರಿಯೊಳ್ ಭವಭಯಂಕರ ಶಂಕರ ಕಿಂಕರಪ್ರಿಯಾ॥

ಮನವೊಲಿದೀಶ್ವರಾರ್ಚನೆಯ ಮಾಡುತ ಮೈಮಱುಕಿದುಬ್ಬಿಕೊಬ್ಬಿಘ
ಷ್ಮನೆ ಪುಟವೇಱಿ ಮಿಱಿ ಕುಣಿದಾಡಿ ಮನಂದಣಿದೊಕ್ಕಲಿಕ್ಕಿ ಭೋ
ರನೆ ಸುಖವಾರಿಗಳ್ಸರಿಯೆ ಸೂಸುವ ಗದ್ಗದದಿಂದೆ ಪೂಜಿಪಾ
ತನೆ ಶಿವತಾನಲಾ ಭವಭಯಂಕರ ಶಂಕರ ಕಿಂಕರಪ್ರಿಯಾ॥

೩ ಗುರುಗೊಹೇಶ ಪ್ರಸಾದ ಪ್ರಸನ್ನಶತಕ (ಸು ೧೩೦೦)

ಉದರಕ್ಕೊಮ್ಮೊಮ್ಮೆ ಕಾಮೋತ್ಕಟ ಕುದಿದಿಹಕೊಮ್ಮೊಮ್ಮೆ ಕೋಪಾಗ್ನಿಪರ್ಬಲ್
ಕದನಕ್ಕೊಮ್ಮೊಮ್ಮೆ ವಿಖ್ಯಾತಿಯ ಕಡುವಿಧಿಗೊಮ್ಮೊಮ್ಮೆ ವಿಶ್ರಾಮಶಯ್ಯಾ
ಸದನಕ್ಕೊಮ್ಮೊಮ್ಮೆ ನಾನಾವಿಧ ಕೃತಕದಕೊಮ್ಮೊಮ್ಮೆ ನಾಂ ಜೇಯದಂತುಂ
ಹೃದಯಕ್ಕಾನಂದಮಂ ಮಾಡೆನಗೆ ಗುರುಗೊಹೇಶಪ್ರಸಾದ ಪ್ರಸನ್ನಾ॥

ಅರಿಷಡ್ವರ್ಗಕ್ಕೆ ಸಪ್ತವ್ಯಸನಕೆ ಮದವೆಂಟಕ್ಕೆ ತಾಪತ್ರಯಕ್ಕೆ
ಳ್ತರಮಪ್ಪೈದಿಂದ್ರಿಯಕ್ಕಂತಗಣಿತವಿಷಯವ್ಯಾಪ್ತಿಗೆನ್ನಂ ವೃಥಾ ನಿ
ಷ್ಕರುಣಂಬೆತ್ತಾವಗಂ ತೀವವೆ ಸದಮಲನಿರ್ಲೇಪ ಸಂಪತ್ಸುಖಕ್ಕೆ
ನ್ನಿರವಂ ಸಾರ್ಚಯ್ಯ ಸಾಕ್ಷಾತ್ಕರಿಸಿ ಗುರುಗೊಹೇಶ ಪ್ರಸಾದ ಪ್ರಸನ್ನಾ॥

ಪರಮಂ ನೀನಾಗೆ ಜೀವಭ್ರಮೆ ಬಳಿಕೆನಗಂ ನಿಟ್ಟಿಸಲ್ಪುಟ್ಟಿಲುಂಟೇ
ಸ್ಮರನಾಶಂ ನೀನಿರಲ್ಕಿನ್ನೆನಗೆ ಮನಸಿಜಾಕ್ಷೋಭಸದಾಳಾಪಮುಂಟೇ
ಗುರು ನೀನೆಂದಾನಿರಲ್ಕಿನ್ನೆನಗೆ ಸಟೆಯ ಸಂಸಾರಸಂಬಂಧಮುಂಟೇ
ನಿರುತಂ ನಿಶ್ಚೈಸಿ ನಾ ನೋಡಿದಡೆ ಗುರುಗೊಹೇಶಪ್ರಸಾದ ಪ್ರಸನ್ನಾ॥

೪ ಶ್ರೀಮುಕ್ತಿರಾಮೇಶ್ವರ ಶತಕ (ಸು ೧೩೦೦)

ಮಗನೇ ಬೇಡದಿರಾರುವಂ ಬೆದಱದಿರ್ಪಾರಿದ್ರ್ಯದೊಳ್ನೋಯದಿರ್
ನೊಗದೊಳ್ದೈನ್ಯವನಿಕ್ಕದಿರ್ಬಳಲದಿರ್ಬೇಂಡಾಗದಿರ್ಕಂದ ಕೇ
ಳ್ದುಗುಡಕ್ಕೇಂ ಕೆಲಸಂ ಮನೋರಥವ ಕೋಯೆಂದೆನ್ನದಿರ್ದಾಗ ಬಾ
ನಗರೇ ಭಕ್ತರು ನಿನ್ನನೆನ್ನುವನೆಲೇ ಶ್ರೀಮುಕ್ತಿರಾಮೇಶ್ವರಾ॥

ನುಡಿಸೈ ನಿನ್ನನೆ ಧ್ಯಾನಿಸುತ್ತವಿಹುದುಂ ನೀಂ ಬಲ್ಲೆ ಮತ್ತಾರುವಂ
ಗಡಣಂಗೊಳ್ಳೆನು ನಿನ್ನ ನಂಬಿಹೆನದೇನ್ಸೈಯೆಂದು ಮಾತಾಡೆ ಬಾ
ವೃಥವುಂಟಾದವರಲ್ಲಿ ನೀಂ ಕಪಟವೇಕೈ ನೊಂದೆನ್ಸೈ [ಬೆಂದೆನ್ಸೈ]
ಮೃಡ ನೀಂ ಮೌನದೊಳಿರ್ದಡೆಂತುಳಿವೆನೈ ಶ್ರೀಮುಕ್ತಿರಾಮೇಶ್ವರಾ॥

ಹರ ಮಾಯಾತೀತ ನಾಕಾಧಿಪನುತ ಘನಕೋದಂಡ ದೈತ್ಯಾರಿ ದಕ್ಷಾ
ಧ್ವರ ರೌದ್ರಾಕಾರ ಮೃತ್ಯುಂಜಯ ಭವ ತ್ರಿಜಗಾರಾಧ್ಯ ಸರ್ವೇಶ ಗಂಗಾ
ಧರ ನಿತ್ಯಾನಂದ ನಾಗಾಭರಣ [ಶರಣ]ಸಂರಕ್ಷಣಾಪೇಕ್ಷಗೌರೀ
ವರಚಿತ್ತಾಧೀಶಯೆನ್ನಂ ಸಲಹು ಮುದದಲೇ ಮುಕ್ತಿರಾಮೇಶಲಿಂಗಾ॥

೫ ಶಿವಲಾವಣ್ಯಪುಣ್ಯಾಗ್ರಗಣ್ಯ ಶತಕ (ಸು ೧೩೦೦)

ಇನ್ನೀ ಸಂಸಾರಮಂ ಭಾರಮನಖಿಳ ಜಡಾಕಾರ ನಿಸ್ಸಾರಮಂ ಬಿ
ಟ್ಟಿನ್ನ ಶ್ರೀಪಾದಪದ್ಮದ್ವಯದೊಳು ಮನೆಯಂ ಕಟ್ಟಿ ಸಂತುಷ್ಟಿ ಭಾವೋ
ತ್ಪನ್ನಾಲಂಕಾರ ಸೌಖ್ಯಂಬಡೆದು ಬದುಕು ನೀನೆಂದೊಡೆನ್ನಿಂ ಕೃತಕೃತ್ಯ
ರ್ಮುನ್ನಿಲ್ಲಂ ಧಾತ್ರಿಗೆಲ್ಲಂ ಶಿವಶಿವ ಶಿವಲಾವಣ್ಯಪುಣ್ಯಾಗ್ರಗಣ್ಯಾ॥

ಮಣಿವೃತ್ತಂ ಮಲ್ಲಿಕಾವಲ್ಲಿಯೊಳಡಸಿದ ಬೆಳ್ಮುಗ್ಗೆಯೊಳ್ಮೋಹಿ ಮುಂದೋ
ರಣದೊಳ್ತೀವಿರ್ದಸೇವಂತಿಯ ಬಿರಿಮುಗುಳಂ ಸುತ್ತಿ ಬಂದೆತ್ತಿ ಬೆಳ್ದಾ
ಸಣಮಂ ಬಂದೋವಿ ಪೂವಂ ತಿರಿದು ನಿಜಪದಾಂಭೋಜಮಂ ಪೂಜೆಮಾಳ್ಪಾ
ಘನ ಸೌಖ್ಯಕ್ಕೆಯ್ದಿಸೆನ್ನಂ ಶಿವಶಿವ ಶಿವಲಾವಣ್ಯಪುಣ್ಯಾಗ್ರಗಣ್ಯಾ॥

ಪ್ರಿಯದಿಂ ನಿಮ್ಮಂಘ್ರಿಯಂ ಪೂಜಿಸದ ನರನ ಕೈ ಭಾವಿಸಲ್ ಭಾಪುರೆ ಜೈ
ಸಿಯ ಕೈ ನಿಮ್ಮೊಳ್ಪನಾಂತೀಕ್ಷಿಸದಧಮನ ಕಣ್ಣಾರಿಣೀಚಕ್ರದೊಳ್ಪೀ
ಲಿಯ ಕಣ್ ದೇವೇಶ ನಿಮ್ಮಂ ಪೊಗಳದವನ ಬಾಯ್ ಪುತ್ತಿನೊಳ್ತೋರ್ಪಬಾಯ್ ನಿ
ರ್ಲಯ ನಿತ್ಯಾನಂದಪ್ಪಂದಾ ಶಿವಶಿವ ಶಿವಲಾವಣ್ಯಪುಣ್ಯಾಗ್ರಗಣ್ಯಾ॥

ಶರಣಾಗೆನ್ನಾತ್ಮ ಚಿಂತಾಮಣಿಯೆ ಪ್ರಣಯದಿಂ ನಿಮ್ಮ ದಿವ್ಯಾಂಘ್ರಿಗೊಪ್ಪಿಂ
ಶರಣೆಂಬೆಂ ಮಾಳ್ಪುದಿನ್ನೀಂ ಮತಿಗತಿ ಸಯಹರುಷವ್ಯಾಪ್ತಿಯಂ ಬಂ
ಧುರ ಭಕ್ತಿಜ್ಞಾನ ವೈರಾಗ್ಯಮನಮಳ ಕಳಾವೃದ್ಧಿಯಂ ಸಿದ್ಧಿಯಂ ಶಂ
ಕರನಿಷ್ಠಾತುಷ್ಟಿಯಂ ಕೇಳ್ಶಿವಶಿವ ಶಿವಲಾವಣ್ಯಪುಣ್ಯಾಗ್ರಗಣ್ಯಾ॥

೬ ಶಿವಗಣಾನಂದಾಬ್ಧಿಚಂದ್ರೋದಯ ಶತಕ (ಸು ೧೩೦೦)

ಆವರ್ತಾನಿಲನಂತೆ ಸುತ್ತಿಸುಳಿವುತ್ತಂ ಜನ್ಮಕಾಂತಾರದೊಳ್
ಪ್ರಾವಾಸಂಬಡಲೇಕೆ ಯಂಜದಿರು ಕಂಡಾ ಯೆಂದು ನಿಮ್ಮಂಘ್ರಿರಾ
ಜೀವಾಗಾರದೊಳೆನ್ನ ಮಾನಸಮದೋನ್ಮತ್ತಾಳಿಯಂ ಸಾರ್ಚುತಂ
ದೇವಾ ಕಾಯ್ದೊಡೆ ದೋಷಮೇಂ ಶಿವಗಣಾನಂದಾಬ್ಧಿಚಂದ್ರೋದಯಾ॥

ಎಣಿಸುತ್ತಿರ್ಕೆನಗೆಂತುಟೆಂದನುದಿನಂ ವೈಧವ್ಯೆಯಪ್ಪಾಕೆ ಮೇ
ಲಣ ಕಾರ್ಯಂಗಳಿಗೊಮ್ಮೆ ಸಂಬಲಿಪಳೇ ಮುತ್ತೈದೆಯಪ್ಪಂಗನಾ
ಮಣಿಯಿನ್ನೇಕೆ ಬಹುಪ್ರಚಿಂತೆಯೆನಗಂ ಸಂಸಾರಮಂ ಖಂಡಿಸ
ಲ್ಪೋಣೆಕಾಱಂ ಪತಿ(ನೀ)ನಿರಲ್ಶಿವಗಣಾನಂದಾಬ್ಧಿಚಂದ್ರೋದಯಾ॥

ಭವವಾರಾಸಿಯ ಮಧ್ಯದೊಳ್ಮುಳುಗಿದೆಂ ಮೂದೇವರಾದಿತ್ಯ ಬಾ
ಭುವನಾರಾಧ್ಯನೆ ಬಾ ಭುಜಂಗಧರ ಬಾ ಭೂತೇಶ ಬಾ ದೇವ ಶಂ
ಭುವೆ ಬಾ ಶಂಕರ ಬಾ ದಯಾಮುಖದೊಳೆನ್ನಂ ನೋಡಿ ಕೈನೀಡು ವಿ
ಶ್ವವಿತಾನಾಗ್ರಣಿ ಶೀಘ್ರದಿಂ ಶಿವಗಣಾನಂದಾಬ್ಧಿಚಂದ್ರೋದಯಾ॥

ಪರಮಾನಂದ ಫಣೀಂದ್ರಬಂಧ ಹಿಮವತ್ ಶೈಲೇಂದ್ರಕನ್ಯಾಮನೋ
ಧರಣೀಜಾತವಸಂತ ಸಂತತ ಸುಖಾ[ಲಂ]ಕಾರಸಾಕಾರ ಭಾ
ಸ್ಕರಚಂದ್ರಾಗ್ನಲನೇತ್ರ ಸದ್ಭಸಿತಗಾತ್ರ ಸ್ತೋತ್ರಪಾತ್ರ ಕೃಪಾ
ಕರ ನೀಂ ರಕ್ಷಿಪುದೆನ್ನುವಂ ಶಿವಗಣಾನಂದಾಬ್ಧಿಚಂದ್ರೋದಯಾ॥

೭ ಶಂಕರ ಶತಕ (ಸು ೧೪೩೦)

ಅರಗಿನ ಬಾಣವಂತೆ ವುರಿಯೆಂಬ ಮಹಾಗುಱಿಯಂತೆ ಯೆಚ್ಚವಂ
ಸರಳನದೇಕೆ ಮತ್ತಱಿಸಿ ಕೋಟಲೆಗೊಂಬನೊ ಲಿಂಗದೇವನಂ
ಧರಿಸಿದನಂತೆ ವಾಙ್ಮನ ಶರೀರವ ತಾನೆನಲುಂಟೆ ದೇವ ಕೇ
ಳ್ದುರಿತಘಱಟ್ಟ ಕಾಲರಿಪು ಭಾವಜವೈರಿ ಭವಾರಿ ಶಂಕರಾ॥

ಭಯಮಂ ಭಕ್ತ ನಿಧಾನಮಂ ಬಡವನಬ್ಜಾರಾತಿಯಂ ಕೈರವಂ
ದಯಮಂ ಧರ್ಮಿ ದಿನೇಂದ್ರನಂ ವನರುಹಂ ಪ್ರಾಣೇಶನಂ ಕಾಂತೆ ಸು
ಪ್ರಿಯನಂ ದಾನವಿನೋದಿ ಕಾಮಿಸುವವೊಲ್ಕೈಯ್ಯಾಂತು ಮುಯ್ಯಾಂತು ನಿ
ಮ್ಮಯ ಕಾರುಣ್ಯವರಪ್ರಸಾದವನೆ ನಾಂ ಹಾರೈಸುವೆಂ ಶಂಕರಾ॥

ಗ್ರಾಮದ ಸಾರವಿರ್ದೆಡೆಗೆ ವಾರಿಧಿ ಬಪ್ಪುದು ಭಾಗ್ಯವಲ್ಲವೇ
ತಾಮಸಲೋಹದಾಲಯಕೆ ಸಿದ್ಧರಸ ಬಂದರೆ ಪುಲ್ಲವೆ ಯುಮಾ
ಸ್ವಾಮಿ ಕರಸ್ಥಲಕ್ಕೆ ನಡೆತಂದುದಱಿಂ ಕೃತ್ಯನಾದೆ ನಾಂ
ಹೋ! ಮಿಗೆ ಧನ್ಯನಾದೆ ಸುಖಿಯಾದೆ ಶುಭೋದಯನಾದೆ ಶಂಕರಾ॥

ಘನ ಸೌಗಂಧಮನಾಂತುದಾ(ರ)ಪವಮಾನಂ ತೆಂಕಣಿಂ ಮೆಲ್ಲಮೆ
ಲ್ಲನೆ ಪಿಂದೆಯ್ತರೆ ಮುಂದೆ ರೋಹಿಣಿಯ ನಲ್ಲಂ ಶೈತ್ಯಮಂ ಬೀಱಿ ಪೆಂ
ಪಿನ ಸೊಂಪಿಂ ವನದೇವಿ ಕೈಗುಡೆ ವಸಂತಂ ದೇವುರೇ ಜೀಯ ಬಾ
ಳಿನೆ ಬಂದಂ ಮಮ ಪಾಣಿಪದ್ಮನಿಗೆ ಕಾರುಣ್ಯಾಕರಂ ಶಂಕರಾ॥

ಸನ್ನಿರೊ ಬನ್ನಿರೋ ಸುರಗಿ ಸಂಪಗೆ ಜಾಜಿ ಸರೋಜಪುಷ್ಪಮಂ
ತನ್ನಿರೊ ಪಾಡಿರೋ ಪೊಗಳಿರೊ ಜಯಜೀಯ ಹಸಾದ ಬಾಳು ಬಾ
ಳೆನ್ನಿರೊ ಯೆಂಬ ಮಂಗಳರವಂಗಳೊಳೆನ್ನಯ ಹಸ್ತಪದ್ಮನೀ
ಕರ್ಣಿಕೆಯಲ್ಲಿ ನಿಂದು ಸಲೆ ಸಂದು ಸದಾಸುಖಿಯಾಗು ಶಂಕರಾ॥

### ೮ ಶಂಕರೇಶಶತಕ (ಸು ೧೮೩೦)

ಕಂದಾ ಬಾ ನಂದನಾ ಬಾ ಮರುಳು ಮಗನೆ ಬಾ ಯಿತ್ತ ಬಾ ಯಿತ್ತ ಬಾ
ಬೆಂದ ವ್ಯಾಮೋಹಬಂಧಂ ಬಱಿದೆ ಬಳಲಿಸಿತ್ತಕ್ಕಟಾ ನೊಂದೈ ಕಂದಾ
ಯೆಂದತ್ಯಾನಂದದಿಂ ಮೈದಡವಿಯಭಯಮಂ ಕೊಟ್ಟು ಮುಂದಿಟ್ಟುಕೊಂಡಿ
ರ್ದೊಂದೆ ವಾಙ್ಮಾತ್ರವೆನ್ನೊಳ್ನುಡಿಯೆ ಬದುಕೆನೇ ಬಾಳೆನೇ ಶಂಕರೇಶಾ॥

ನಡೆ ಸಾ ಹೋ ದೇವ ಬಂದಂ ಪೊಡಮಡು ಪೊಗಳೊ ಬಣ್ಣಿಸೋ ಕೀರ್ತಿಸೋ ವು
ಗ್ಗಡಿಸೋ ಕೈವಾರಿಸೋ ತೋರಣವ ವಿರಚಿಸೋ ಭೇರಿಯಂಪ್ರೊಯ್ಸೊ ಕಟ್ಟೋ
ಗುಡಿಯಂ ಯೆಂಬೊಂದು ಘೋಷಂ ಪಸರಿಸೆ ಕರಪೀಠಕ್ಕೆ ಸಾರ್ದೊಪ್ಪೆ ರಮ್ಯಂ
ಬಡೆದೆಲ್ಲಾ ಭಕ್ತರಂ ಪಾಲಿಸುತೆ ಬದುಕು ಬಾಳಯ್ಯ ನೀಂ ಶಂಕರೇಶಾ॥

ಕಂಡೆಂ ಕಾಮವಿರೋಧಿಯಂ ಕರುಣಿಯಂ ಕಾತ್ಯಾಯನೀಲೋಲನಂ
ಕಂಡೆಂ ವೇದವಿನೋದಿಯಂ ವಿಭವನಂ ವಿಶ್ವಾವನೀಪಾಲನಂ
ಕಂಡೆಂ ಬ್ರಹ್ಮಕಪಾಲಿಯಂ ಬಸವದಂಡಾಧೀಶ್ವರಸ್ನೇಹಿಯಂ
ಕಂಡೆಂ ಶಂಕರಲಿಂಗನಂ ಮಮಕರಾಂಭೋಜಾತ ಸನ್ಮೋಹಿಯಂ॥

ಎನಗಂ ಶೈಲೇಂದ್ರಸಂಜಾತೆ ಜನನಿ ಶಶಿಲೇಖಾವತಂಸಂ ಪಿತ ಸ್ಕಂ
ದ ನಿಜಭ್ರಾತಂ ಮಹಾಬಾಂಧವರು ಪರಮಭಕ್ತರ್ಸುದೇಶಂ ತ್ರಿಲೋಕಂ
ಜನನಸಾಫಲ್ಯವಾಹಾ ಶ್ರುತಿವಚನವಲೇ ಸಾಕ್ಷಿಯಿನ್ನಾ ಕೃತಾಂತಂ
ಮುನಿದೇನಂ ಮಾಳ್ಪ ಪುಣ್ಯಾಧಿಕರ ಬಸುಱಬಂದೆನ್ನುವಂ ಶಂಕರೇಶಾ॥

### ೯ ಸದಾಶಿವ ಶತಕ (ಸು ೧೩೦೦)

ಶಿಶುವಿಗೆ ತಾಯಿ ಪತ್ನಿಗೆ ನಿಜೇಶ್ವರನಾಳ್ದ ತಂತ್ರವರ್ಗಕಾ
ಸಸಿಗೆ ಸುವೃಷ್ಟಿ ದೇಸಿಗಗೆ ನಂಟನು ನೀರೊಳಗದ್ದಂಗೆ ತೆಪ್ಪಮುಂ
ತೃಷೆಯೆಳು ಬಿದ್ದವಂಗುದಕಮೆಂಬಿವು ಕಾಯ್ವವೊಲಿಂದುಮೌಳಿ ಕಾ
ಡಿಸದೆ ಕೃಪಾವಲೋಕನದಿ ರಕ್ಷಿಪುದೆನ್ನನೆಲೇ ಸದಾಶಿವಾ॥

ಸಲ್ಲಲಿತಪ್ರಭಾವ ಶರಣಾಗತವತ್ಸಲ ದೇವ ದೇವಯಿ
ನ್ನಿಲ್ಲ ಸಮರ್ಥರೆನ್ನೊಡೆಯರಿಲ್ಲ ಕೃಪಾಕರರಿಲ್ಲ ಕಾಯ್ವರಿ
ನ್ನಿಲ್ಲ ವುದಾರರಿಲ್ಲ ಶರಣಾಗತರಕ್ಷಕರಿಲ್ಲ ದೇವ ನೀ
ನಲ್ಲದೆ ಮತ್ತೆ ಬೇಱಿ ಗತಿಯಿಲ್ಲೆನಗೇತಱಿಳುಂ ಸದಾಶಿವಾ॥

ಕಪಿಲಜಟಾವಿಲಾಸ ನಯನತ್ರಯರಂಜಿತ ಪಂಚವಕ್ತ್ರ ಖ
ಡ್ಗ ಪರಶು ಶೂಲ ವಜ್ರಮಭಯಾಂಕಿತ ದಕ್ಷಿಣ ಹಸ್ತವಾಮ ದಿ
ಗ್ವಿಪುಲ ಕಪಾಲವಹ್ನಿ ಡಮರಂಕುಶ ಘಂಟಿಕಪಾಣಿ ದಾನವ
ದ್ವಿಪಘನಚರ್ಮಧಾರಿ ಪರಿರಕ್ಷಿಪುದೆನ್ನನೆಲೇ ಸದಾಶಿವಾ॥

ಕೇಶವವಂದ್ಯ ವಂದ್ಯಜನಪಾವನ ಪಾವನಮೂರ್ತಿ ಮೂರ್ತಿಸಂ
ತ್ರಾಸಿತದಕ್ಷ ದಕ್ಷಮುಖವಿಗ್ರಹ ವಿಗ್ರಹಶೂರ ಶೂರಸಂ
ಕಾಶ ಸಹಸ್ರಕೋಟಿರವಿ ಶಾಶ್ವತ ಪನ್ನುತನಾದ ಸಿದ್ಧಸೋ
ಮೇಶ ಮಹೇಶಯೀಶ ಪರಿರಕ್ಷಿಪುದೆನ್ನನೆಲೇ ಸದಾಶಿವಾ॥

### ೧೦ ತ್ರಿಯಂಬಕ ಶತಕ (ಸು ೧೪೦೦)

ಗಾನದ ಸೊಂಪಿನಿಂಪು ಕಿವಿಗಳ್ಗಿಡಿದಾಗಳನೇಕ ಸೌಖ್ಯಸಂ
ಧಾನದ ವೇಳೆಯಲ್ಲಿ ಪಿರಿದಪ್ಪ ಮಹಾದ್ಭುತ ಕಾಲದಲ್ಲಿತಿ
ಜ್ಞಾನಮೊಡರ್ಚಿದಲ್ಲಿಮಸುಖಂಗೆಡುವಲ್ಲಿ ಭವತ್ಪದಾಂಬುಜ
ಧ್ಯಾನಮನೊರ್ಮೆಯುಂ ಮಱಿಯದಂತೆನಗಂ ದಯೆಗೈ ತ್ರಿಯಂಬಕಾ॥

ನೊತ್ತದ ಕಾಂತಿಯಿಂದೆ ಕರಮೊಪ್ಪುವ ಪಂಚಮುಖ ತ್ರಿಣೇತ್ರನೀಂ
ಹತ್ತು ಭುಜಂಗಳಿಂದೆಸೆವ ಪಾವನ ಮೂರ್ತಿ ಮದೀಯ ಚಿತ್ತಮೆ
ತ್ತೆತ್ತ ತಳರ್ದೊಡತ್ತಲೊಡನೆಯ್ದಿ ಮನೋಹರಮಾಗಿ ತೋಱಿಯ
ಜ್ಯೋತ್ತಿದವೋಲಿರಯ್ಯ ಪುರುಷೋತ್ತಮಸಂವಿನುತಾ ತ್ರಿಯಂಬಕಾ॥

ಶೂಲಿ ಕಠೋಟಿಮಾಲಿ ಪನಮಾಲಿ ಮೃದುಸ್ತವಕೇಲಿ ಶತ್ರುನಿ
ರ್ಮೂಲಿ ಯಶೋವಿಶಾಲನುತಶೀಲಿ ಪರಾಕ್ರಮಶಾಲಿ ಶೀತಕೃ
ನ್ಮೌಳಿ ನತಾಮರಾಳಿ ವೃಷಪಾಲಿ ಭವಾಂಧಕುಲಾಂಶುಮಾಲಿ ಕಾ
ಪಾಲಿ ಶಿವಾಂಕಪಾಲಿ ಪರಿಪಾಲಿಸು ಸತ್ಕೃಪೆಯಿಂ ತ್ರಿಯಂಬಕಾ॥

## ೧೧ ದಾರಿದ್ರ್ಯವಿದ್ರಾವಣ ಶತಕ (ಸು ೧೫೦೦)

ಆರಿಂಗೆನ್ನ ಮಜುಂಕಮಂ ವುಸುರ್ವೆ ಮತ್ತಾ(ರಿ)ಂಗಳಲ್ದೋಱುವೆಂ
ಆರಿಂಗಾಯಸಮಿಂತುಟೆಂದು ನುಡಿವೆಂ ಮದ್ದಾತ ಮತ್ತಾತ ನೀಂ
ಕಾರುಣ್ಯಂಮಿಗೆ ನೋಡುಗಲ್ಲದುಳಿಯೆಂ ನಿರ್ಮಾಯ ನಿತ್ಯಂ ನಿರಾ
ಧಾರಾ ಸದ್ಗುರು ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣಾ ॥

ಆರೋಗಿಪ್ಪೆಡೆಯಲ್ಲಿ ನಿದ್ರೆಯೆಡೆಯಲ್ಲಿ ಸ್ವಪ್ನದಲ್ಲಿಂ ಮಹಾ
ಘೋರಂ ದುಃಖದಿ ಶಾಂತಿಯಲ್ಲಿ ಶುಭದಲ್ಲಿಂ ಸಂಚರಿಪಲ್ಲಿ ಮ
ತ್ತೀರೈದವಸ್ಥೆಗಳಲ್ಲಿ ನಿಮ್ಮ ನೆನಹಂ ಕೈಗೆಯ್ದು ರಕ್ಷಿಪ್ಪುದುಂ
ಕಾರುಣ್ಯಾಕರ ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣಾ ॥

ಬಾರೆನ್ನಾಳ್ದನೆ ಬಾರೊ ಭಕ್ತಜನಚಿಂತಾರತ್ನವಿಶ್ವಾತ್ಮಕಂ
ಬಾರೆನ್ನಾಶ್ರಯ ಬಾರೊ ಭಾವಜಹರಂ ಭಕ್ತೀವಧೂವಲ್ಲಭಂ
ಬಾರೈಯ್ಯೋ ದ್ವಿಜರಾಜಮೌಳಿ ಸುಖವಾರಿಂ ವಿಶ್ವಸಂಸಾರಿ ನೀಂ
ಕಾರುಣ್ಯಾಕರ ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣಾ ॥

ಈರೈವತ್ತು ಸುಮೇಕವೃತ್ತಮನಿದಂ ನಾ ಬಿನ್ನಪಂಗೆಯ್ದೆ ನೀ
ನಾರೈಯ್ಯಾ ಸಲೆಕೇಳ್ದು ನಿನ್ನ ಮಗನೆಂದೆನ್ನಂ ಸದಾ ರಕ್ಷಿಸು
ತ್ತಾರೆಂದೋದಿದವರ್ಗೆ ಕೇಳ್ದು ಬರೆದರ್ಗಂ ಪಾಠಗೆಯ್ದರ್ಗೆ ನೀಂ
ಕಾರುಣ್ಯಾಕರ ಸೋಮನಾಥ ಸಲಹೈ ದಾರಿದ್ರ್ಯವಿದ್ರಾವಣಾ ॥

## ೧೨ ಅಂಬಿಕಾಪತಿ ಶತಕ (ಸು ೧೫೦೦)

ಕಾಮವೆ ಭಕ್ತ ಕ್ರೋಧವೆ ಮಹೇಶ್ವರ ಲೋಭವೆ ತಾಂ ಪ್ರಸಾದಿ ಕೇ
ಪ್ರೇಮವೆ ಪ್ರಾಣಲಿಂಗಿ ಮದವೇ ಶರಣಂ ಬಗೆಯಲ್ಕೆ ಮತ್ಸರಂ
ತಾ ಮಹಲಿಂಗದೈಕ್ಯಮೆನಲಿಂತು ಷಟ್ಸ್ಥಲಮಾಗಲೆನ್ನೊಳುಂ
ಸೋಮಕಳಾಧರಾ ನಿಲಿಸಿ ರಕ್ಷಿಪುದೆನ್ನುವನಂಬಿಕಾಪತಿ ॥

ಮನದೊಳು ನಿಮ್ಮ ಚಿಂತೆ ನುಡಿಯೊಳು ಶಿವ ನಿಮ್ಮ ಪೊಗಳ್ತೆ ಕಾಯದೊಳ್
ಘನ ಶಿವಲಿಂಗ ಪೂಜೆ ನೆಲೆಗೊಂಡಿಹ ಭಾಗ್ಯವದೆಂದಿಗಪ್ಪುದೋ
ಅನುಪಮ ದಾನಿ ಮತ್ತುಳಿದ ವಸ್ತುವನಾವುದನೊಲ್ಲೆ ನಿಮ್ಮನಾ
ನಿನಿತನೆ ಬೇಡುವೆಂ ಕೃಪೆಯೊಳಿತ್ತೊಲವಿಂ ಸಲಹಂಬಿಕಾಪತಿ ॥

ಶ್ರೀಮದನಾಥನಾಥ ಕರುಣಾಕರ ಶಂಕರ ಶಾಂತ ನಿತ್ಯ ನಿ
ಸ್ಸೀಮ ಸುಧಾಂಶುಜೂಟ ರವಿಕೋಟಿಸುತೇಜ ಮಖಾರಿಭಕ್ತಚಿಂ
ತಾಮಣಿ ಕಾಲಕಾಮಪುರಭಂಜನ ನಂಬಿದೆ ನಿಮ್ಮನಾನತಿ
ಪ್ರೇಮದೊಳೆನ್ನುವಂ ಬಿಡದೆ ರಕ್ಷಿಪುದಕ್ಕಜಿತೊಳಂಬಿಕಾಪತಿ ॥

### ೧೩ ಗುರುಗೊಹೇಶ್ವರ ಸಾಂಪ್ರದಾಯ ಶತಕ (ಸು ೧೩೦೦)

ನೆನೆವೆಡೆಯೊಳ್ ಸಮೇಳದೆಡೆಯೊಳ್ ಸಲೆ ಕೇಳ್ವೆಡೆಯೊಳ್ಸಮಸ್ತವಾ
ಸನೆಗಳನಿಂಬುಗೊಂಬೆಡೆಗಳೊಳ್ ನೆಱೆ ನೋಳ್ಪೆಡೆಯೊಳ್ ಯಥೇಷ್ಟ ಭೋ
ಜನದೆಡೆಯೊಳ್ಸಮಾಪ್ತಿಯೆಡೆಯೊಳ್ ಶಿವಲಿಂಗಸೌಖ್ಯಮಂ
ನೆನೆವನೆ ಬಲ್ಲಿದಂ ಗುರುಗೊಹೇಶ್ವರ ಸಾಂಪ್ರದಾಯದೊಳ್ ॥

### ೧೪ ಗುರುಗೊಹೇಶ್ವರಪಾದಪಯೋಜಪೂಜಕ ಶತಕ (ಸು ೧೩೦೦)

ನದಿಯ ತಟಾಕದೊಳ್ಪಿರಿಯ ಪಾಸಱೆಯೊಳ್ಪಳಿನಸ್ಥಳಂಗಳೊ
ಳ್ಮದಮನೊಡರ್ಚೆ ತೋರ್ಪ ವನದೊಳ್ಗಿರಿಗಹ್ವರದೊಳ್ಸರಸ್ಸಿಯೊ
ಳ್ಸದಮಳ ಚಿತ್ತದೊಳ್ಪರದೊಳಾಲಯದೊಳ್ಶಿವಲಿಂಗಪೂಜೆಯಂ
ಪದುಳದಿ ಮಾಡುವಂ ಗುರುಗೊಹೇಶ್ವರ ಪಾದಪಯೋಜಪೂಜಕಂ ॥

ಲಿಂಗವನೀಕ್ಷಿಪಲ್ಲಿ ಹರುಷಾಶ್ರುಮೊಸರ್ದೊಡೆ ಲಿಂಗಸೋಂಕಿನೊ
ಳ್ಪಿಂಗದೆ ರೋಮರಾಜಿ ಸಲೆ ಬೇಗುರಿಸಿರ್ಪೊಡೆ ಲಿಂಗಭಾವಸಂ
ಸಂಗಗಳೆಯ್ದೆ ಮೆಯ್ಮಱೆದು ಮೂರ್ಛೆಯೊಳಿರ್ಪೊಡೆ ತನ್ಮಹಾತ್ಮಕಂ
ಲಿಂಗಸುಸಂಗಿ ಮದ್ಗುರು ಗೊಹೇಶ್ವರಪಾದಪಯೋಜಪೂಜಕಂ ॥

ಕರಕಮಲಂಗಳೊಳ್ನಯನಪಂಕಜದೊಳ್ವದನಾಂಬುಜಾತದೊಳ್
ಳ್ವರ ಹೃದಯಾಬ್ಜದೊಳ್ತನುಸರೋಜದೊಳಂತಖಿಳಾಂಗಪದ್ಮದೊ
ಳ್ಪರಶಿವಲಿಂಗ ಭಾಸ್ಕರಕರಂಡಮನಾಂತೆಸೆದಿರ್ಪ ಭಕ್ತಿಸ
ಚ್ಚರಿತೆಯನುಳ್ಳವಂ ಗುರುಗೊಹೇಶ್ವರಪಾದಪಯೋಜಪೂಜಕಂ ॥

### ೧೫ ಗುರುಶಾಂತ ಶತಕ (ಸು ೧೪೩೦)

ಕರ್ಮದೊಳಂ ಮನಸ್ಸಿನೊಳೆ ವಾಕ್ಯದೊಳಂ ಬಿಡುವಿಲ್ಲದಾವಗಂ
ನಿರ್ಮಲ ಪೂಜೆಯಿಂದೆ ನೆನಹಿಂದೆ ನಿಜಸ್ತವದಿಂದವಾನಿರು
ತ್ತೊರ್ಮೆಯುಮನ್ಯಭಾವಮಿನಿತಿಲ್ಲದೆ ಜನ್ಮದ ಬಾಧೆ ಪಿಂಗುವೀ
ಮರ್ಮದೊಳಿಪ್ಪುದೊಂದು ವರಮಂ ಗುರುಶಾಂತನೆ ಕೊಟ್ಟು ರಕ್ಷಿಸಾ ॥

ನಿಟ್ಟಿಸಿ ದಿಟ್ಟಿಗಳ್ದಣಿಯದರ್ಚಿಸಿ ಕೈಗಳ ಕಾಂಕ್ಷೆ ಪಿಂಗದ
ಟ್ಟಟ್ಟಿಯ ನೇಹಮಂ ನೆಱೆ ನಿಮಿರ್ಚದೆ ಕಣ್ಮನದೊಳ್ನಿರಂತರಂ
ಕಟ್ಟಿಡವೊಲ್ಪವನ್ಮನ(ನ)ದಿಂದಿರುತಿರ್ಪ ವಿಚಾರಮೆನ್ನ ಮೆ
ಯ್ವೆಟ್ಟಿಱೆ ನಿಲ್ವುದೊಂದು ವರಮಂ ಗುರುಶಾಂತನೆ ಕೊಟ್ಟು ರಕ್ಷಿಸಾ ॥

ಪದವಿನೊಳರ್ಚಿಸುತ್ತೆ ನಲವಿಂದೆ ನಿರೀಕ್ಷಿಸುತಳ್ಕಱಿಂದೆಗ
ದ್ಗದವೆಸೆಯಲ್ಕೃದೂಕ್ತಿಯೊಳೆ ಪಾಡುತೆಯಶ್ರುಜಲಂಗಳುಣ್ಮೆಸ
ನ್ಮುದವವೆದುಬ್ಬಿ ಕೊಬ್ಬಿ ಪುಳಕಂದಳೆದಾನೊಸೆದಿಂತು ನಿಮ್ಮನೇ
ಹ ದೊಳಿರುತಿಪ್ಪುದೊಂದು ವರಮಂ ಗುರುಶಾಂತನೆ ಕೊಟ್ಟು ರಕ್ಷಿಸಾ ॥

## ೧೬ ಮಹೇಶ್ವರ ಶತಕ (ಸು ೧೪೩೦)

ಎಡವಿಡದೀಶ ನಿಮ್ಮ ನಿಜಮೂರ್ತಿಯ ನೋಡುತ ನೋಡಿ ಭಕ್ತಿ ನೂ
ರ್ಮಡಿಸಿ ಮಹೇಶ ನಿಮ್ಮಡಿಯ ಪೂಜೆಯ ಮಾಡುತ ಮಾಡಿ ಕೂಡಿ ಸಂ
ದೆಡವಿಡದಿರ್ದು ಚಿತ್ತನಲಿದಾಡುವ ಭಕ್ತಿಯ ಮುಕ್ತಿ ಕೀರ್ತಿಯುಂ
ಬಿಡದಿಹುದೊಂದು ಸುವ್ರತವ ನೀಂ ಕೃಪೆ ಮಾಡುವುದೈ ಮಹೇಶ್ವರಾ ॥

## ೧೭ ನಿಜಶಾಂತನಿಷ್ಕಳ ಶತಕ (ಸು ೧೪೩೦)

ಕಂಡಡೆ ಕಂಡು ಮುಟ್ಟದೊಡೆ ಮುಟ್ಟಿ ಮಹಾಘನಲಿಂಗಮೊಲ್ದು ತಾ
ನುಂಡಡೆಯುಂಡು ಕೇಳದೊಡೆ ಕೇಳುತ ನಾಸಿಕದಿಂದೆ ಗಂಧಮಂ
ಕೊಂಡದೆ ಕೊಂಡು ಲಿಂಗಸಹವಾಗಿ ವಿರಾಜಿಪ ಲಿಂಗಲೀಲೆ ಮುಂ
ಕೊಂಡೆಸೆದಿರ್ದೊಡಾತನೆ ಲಿಂಗನಲೈ ನಿಜಶಾಂತನಿಷ್ಕಳಾ ॥

## ೧೮ ಸಂಗಮೇಶ್ವರ ಶತಕ (ಸು ೧೪೫೦)

ಆಡುತ ಪಾಡುತಂ ನೆನೆವುತಂ ಬಿಡದರ್ಚಿಸಿ ನಿಮ್ಮ ಮೂರ್ತಿಯಂ
ನೋಡುತ ಕೀರ್ತಿಸುತ್ತ ನಲವಿಂದೊಲವಿಂ ಮಿಗೆ ಚಿತ್ತ ನಿಮ್ಮೊಳ
ಕ್ಕಾಡುತಲುಣ್ಮವಶ್ರುಜಲದಿಂ ಪರಿಶೋಷಿಸಿ ನಿಮ್ಮ ಭಕ್ತಿಯೊ
ಳ್ಕ್ರೀಡಿಸುವಂತೆ ಮಾಡು ಬರದೂರ ಪುರಾಧಿಪ ಸಂಗಮೇಶ್ವರಾ ॥

ನಿನ್ನನೆ ನೋಡುವಕ್ಷಿಗಳವನ್ಯರ ನೋಡನೆ ನಿನ್ನ ಸ್ತೋತ್ರದಿಂ
ದುನ್ನತಮಾದ ಜಿಹ್ವೆ ಸಲೆಯನ್ಯರ ಪಾಡದೆ ನಿನ್ನ ಕೀರ್ತಿಯಂ
ಬಿನ್ನಣದಿಂದ ಕೇಳ್ವ ಕಿವಿಯನ್ಯವ ಕೇಳದೆ ಯೇಳ್ಗೆಯಿಂ ಸದಾ
ನಿನ್ನವನಾಗಿ ಮಾಡು ಬರದೂರ ಪುರಾಧಿಪ ಸಂಗಮೇಶ್ವರಾ ॥

ಚಾರುರೆ ಜೀಯ ಭಾಪು ಮಝುರೇ ಪರದೇವಘಟಿಟ್ಟ ಪಾರ್ವತೀ
ರಾಗಸುಧಾಬ್ಧಿಹಂಸ ಧೀರುರೇ ಭಳಿ ಕಾಲವಿಜೇಯ ಸಿದ್ಧವಿ
ದ್ಯಾಗಣ ದೇವು [ರೇ]ಭಲರೆ ಪಾಯವಧಾರುಯೆನಿಪ್ಪ ಘೋಷಗ
ಳ್ಪ್ರಾಗಿಸುಗೆನ್ನ ಜಿಹ್ವೆ ಬರದೂರ ಪುರಾಧಿಪ ಸಂಗಮೇಶ್ವರಾ ॥

### ೧೯ ಪಂಚಾಕ್ಷರೀವಲ್ಲಭ ಶತಕ (ಸು ೧೫೫೦)

ನತಪದ್ಮಾಂಬಕ ನವ್ಯರೂಪ ನಗಜಾತಾನಾಥ ನಕ್ಷತ್ರಸಂ
ತತಿಭರ್ತಾರಕಿರೀಟಮಂಡನ ನವಬ್ರಹ್ಮೇಂದ್ರ ನಗ್ನಾಂಗಶೋ
ಭಿತನದ್ವೈತನದೀಧರಾಖ್ಯ ನಗಚಾಪಾಶೀರುಷಾಭ್ರಸ್ಥಲಾಂ
ಕಿತ ನಂಜುಂಡ ನಮಃಶಿವಾಯ ಸಲಹೈ ಪಂಚಾಕ್ಷರೀವಲ್ಲಭಾ ॥

ಮನುಮಾರ್ಗಸ್ತುತ ಮಲ್ಲಿಕಾರ್ಜುನ ಮಹಾದೇವೇಶ ಮತ್ತದ್ವಿಪಾ
ಜಿನ ಸವ್ಯಾಸ ಮಹೋಕ್ಷಕೇತನ ಮಖಪ್ರಧ್ವಂಸಮಧ್ಯಸ್ಥ ಮ
ಜ್ಜನಸಂತುಷ್ಟ ಮನೋಹರಾಂಗ ಮಣಿಪೂರಾಧಾರ ಮತ್ಸ್ಯಾಂಕಮ
ರ್ದನ ಮನ್ನಾಥ ನಮಃಶಿವಾಯ ಸಲಹೈ ಪಂಚಾಕ್ಷರೀವಲ್ಲಭಾ ॥

ವಾತಾಹಾರವಿಭೂಷ ವಾಸವನತಾಂಘ್ರಿದ್ವಂದ್ವ ವಾಮಾಂಗನಾ
ಪ್ರೀತಿಪ್ರೇರಕ ವಾತುಳಾದಿನುತ ವಾದಿವ್ರಾತವಾಗ್ಗೋಚರಾ
ಖ್ಯಾತೋದ್ಯೋರಿತ ತತ್ತ್ವವಾರಿಜಭವಾಹಂಕಾರವಿಚ್ಛೇದ ವಾ
ರ್ಜಾತಾಕ್ಷ್ವೇಡ ನಮಃಶಿವಾಯ ಸಲಹೈ ಪಂಚಾಕ್ಷರೀವಲ್ಲಭಾ ॥

### ೨೦ ಅನತಕಲ್ಪಭೂಜ ಶತಕ (ಸು ೧೩೦೦)

ತ್ರ್ಯಕ್ಷರಮೂರ್ತಿಯಾದ ಪರಮಪ್ರಭುವಾದ ಕೃಪಾಂಬುರಾಶಿಯಾ
ದುಕ್ಷಪತಾಕನಾದಖಿಳಲೋಕವ ಪಾಲಿಪನಾಥನಾದ ಪ
ದಾಕ್ಷ ವಿರಿಂಚಿಮುಖ್ಯ ಸುರವಂದಿತಪಾದನುಮಾದ ಯೀವಿರೂ
ಪಾಕ್ಷನೆ ದೇವನೆಂದು ನೆಱೆ ನಂಬಿದೆನಾನತಕಲ್ಪಭೂಜನಂ ॥

ಅಕ್ಷಯನಾದ ವಾಙ್ಮನಸಗೋಚರನಾದಘನಾಶನಾದ ಭಾ
ಳೇಕ್ಷಣನಾದ ಸರ್ವಗತನಾದ ವಿಯನ್ನದೀಮೌಲಿಯಾದ ಪಂ
ಚಾಕ್ಷರಿಯಾಣ್ಮನಾದ ಗಿರಿಜಾಹರುಷಾಸ್ಪದನಾದ ಯೀವಿರೂ
ಪಾಕ್ಷನೆ ದೇವನೆಂದು ನೆಱೆ ನಂಬಿದೆನಾನತಕಲ್ಪಭೂಜನಂ ॥

ಲಕ್ಷ್ಮಿಸಲಚ್ಯುತ ಪ್ರಮುಖ ಪದ್ಮಜ ಸಿದ್ಧಜರೆಂಬ ದೇವರಂ
ಶೂಕ್ಷಿಸ ಲೆಲ್ಲಪೊಲ್ದು ಘನ ಪಾಶುಪತಿತ್ವಮನಿತ್ತು ದೇವ ನೀಂ
ರಕ್ಷಿಸೆನಲ್ಪುರತ್ರಯಮನೀಕ್ಷಿಸಿ ಕಾಯ್ದ ಯೀವಿರೂ
ಪಾಕ್ಷನೆ ದೇವನೆಂದು ನೆಱೆ ನಂಬಿದೆನಾನತಕಲ್ಪಭೂಜನಂ ॥

## XXV

### ಚನ್ನವೀರದೇಶಿಕ ವಿರಚಿತ

### ೨೧ ಅಷ್ಟಾವರಣಮಣಿದರ್ಪಣ ಶತಕ (ಸು. ೧೬೫೦)

ಹರಿಹರದೇವ ಪದ್ಮರಸದೇವ ಹಲಾಯುಧದೇವ ದೇವ ಪಾ
ಲ್ಕುಱಿಕೆಯ ಸೋಮದೇವ ಗಣಮಲ್ಲಣ ಬಿಲ್ಲಣ ವೀರಣಾರ್ಯಸ
ದ್ಗುರುವರದೇವಮುಖ್ಯ ನಿಜಶುದ್ಧ ಶಿವಾರ್ಚಕರೊಲ್ದು ಪೇಳ್ದ ಶಂ
ಕರಕವಿತಾಪ್ರಸಾದಮಿರಲ್ಕೆನ್ನೊಳಗಾನಿಶ ಮಲ್ಲಿಕಾರ್ಜುನಾ ॥

ಗುರು ಸಿದ್ಧೇಶ್ವರವಂಶವರ್ಧನಕರ ಶ್ರೀವೀರಣಾರಾಧ್ಯದೇ
ವರ ಪುಣ್ಯೋದರಸಂಭವಾಭವಪದಾಂಭೋಜಾತಸೌಗಂಧ ಷ
ಟ್ಚರಣಾಭಂ ಚೆನವೀರದೇಶಿಕನುಸುರ್ದಂ ವೀರಶೈವರ್ಗೆಯಾ
ಚರಣಾಚಾರ ಮಹಾಪ್ರಬಂಧಮಿದ ಕೇಳಾ ಶಾಂತಮಲ್ಲೇಶ್ವರಾ ॥

ಗುರುಪದಪೂಜೆ ಲಿಂಗಪದಪೂಜೆ ಚರಾರ್ಚನೆ ಪಾದಪೂಜೆ ತ
ಚ್ಚರಣಜಲಪ್ರಸಾದವನುಸೇವನೆ ಭಸ್ಮ ಸದಾಕ್ಷಮಾಲಿಕೋ
ಚ್ಚರಣಸುಮಂತ್ರಮಷ್ಟಮೆನಿಪಾವರಣಂಗಳ ಷಟ್ಸ್ಥಲಾನ್ವಿತಾ
ಚರಣಮಹಾಪ್ರಬಂಧಮಿದನಾಲಿಸು ಪಾಲಿಸು ಮಲ್ಲಿಕಾರ್ಜುನಾ ॥

ಪಂಚಾಂಗೋದ್ಭವಭೂತಿ ಪಾವನಕರಂ ರುದ್ರಾಕ್ಷ ರುದ್ರೇಕ್ಷಣಂ
ಕಿಂಚಿತ್ತೀರ್ಥ ವಿಶೇಷಮೋಕ್ಷಫಲದಂ ಶೇಷಂ ರುಜಾಭೇಷಜಂ
ಪಂಚಪ್ರೋಕ್ಷ ಸುವರ್ಣಮುಕ್ತಿಪದಮೆಂದೊಲ್ದೀಶಭಕ್ತಿವ್ರಜಂ
ಪಂಚಾಚಾರದೊಳಿರ್ಪುದೇ ಸುಚರಿತಂ ಶ್ರೀಶಾಂತಮಲ್ಲೇಶ್ವರಾ ॥

ಶರಣಪ್ರೇಮಿ ಮಹೇಶ್ವರಂ ಸಕಲರಕ್ಷಾಮೂರ್ತಿ ಮಾಹೇಶ್ವರಂ
ಗುರುಲಿಂಗಾಸ್ಯ ಮಹೇಶ್ವರಂ ಭಸಿತರುದ್ರಾಕ್ಷಾಂಗಿ ಮಾಹೇಶ್ವರಂ
ಹರಪೂಜಾರ್ಥಿ ಮಹೇಶ್ವರಂ ಜನನಜಾಡ್ಯಚ್ಛೇದ ಮಾಹೇಶ್ವರಂ
ಗುರುಲಿಂಗಾಂಗಿ ಮಹೇಶ್ವರಂ ಗುರುವಲಾ ಶ್ರೀ ಶಾಂತಮಲ್ಲೇಶ್ವರಾ ॥

ಕಾಮನ ಮೆಟ್ಟಿ ಕಾಲನಿಗಳಂಗಳ ಕಿತ್ತಿಡುತಾಲ್ದು ಗರ್ವದು
ರ್ಭಾವ ದುರಾಸೆಯೆಂಬ ಕುಜರಾಜಿಯ ನೆಗ್ಗಿಡುತೊಲ್ದು ಷಟ್ಸ್ಥಲೋ
ದ್ಭಾವಿಗಳೆಂಬ ಷಟ್ಚರಣಗಳ್ಗೆ ನಿಜೋನ್ಮದಗಂಧವೀವುತ
ಷ್ಟಾವರಣೇಭ ಬಂದು ವೃಷಭಾಕೃತಿಯಾದುದೋ ಮಲ್ಲಿಕಾರ್ಜುನಾ ॥

ಚೆನ್ನವೀರದೇಶಿಕ ವಿರಚಿತ

## ೨೨ ಈಶ್ವರವೋಲಗ ಶತಕ (ಸು. ೧೬೫೦)

ಗುರು ಸಿದ್ಧೇಶ್ವರವಂಶವರ್ಧನಕರ ಶ್ರೀವೀರಣಾರಾಧ್ಯ ದೇ
ವರ ಗರ್ಭೋದ್ಭವ ಚೆನ್ನಣಾರ್ಯರೊಲವಿಂದೀಕ್ಷೇತ್ರಮಾಹಾತ್ಮೆಯಂ
ಪುರಮಧ್ಯಸ್ಥಿತ ಮಲ್ಲಿಕಾರ್ಜುನಸಭಾವಿಸ್ತಾರಮಂ ಪೇಳ್ವುದೆಂ
ದೊರೆದಂ ತತ್ತೃಣಬಿಂದುಪಟ್ಟಣವರ ಶ್ರೀವೀರಭೂಪಾಲಕಂ ||

ವೃದ್ಧಾನುಕ್ರಮದಿಂ ವದಂತಿಯಿತಿಹಾಸಸ್ಕಂದವಾತೂಲನಿಂ
ಸಿದ್ಧಾಂತರ್ಜುನಗೀತೆ ತೀರ್ಥಮಹಿಮಾಬ್ರಹ್ಮೋತ್ತರಾಖಂಡದಿಂ
ಸದ್ಯೋದೀಚ್ಯವಹಂಗಳಿಂ ತೃಣಪುರಕ್ಷೇತ್ರಂ ಮಹಾಕ್ಷೇತ್ರಮೆಂ
ದುದ್ಧಾರಂ ಮಿಗೆ ಮಾಡಿದೇ ಮಹಜನಂ ಕೈಕೊಂಬುದೀ ಕಾವ್ಯಮಂ ||

ಬಾರದರಿಲ್ಲವೀ ನಗರಿಗಗ್ರಜರಾಗಮಶಾಸ್ತ್ರಕೋವಿದರ್
ಸಾರಿ ಮಹಾಪುರಾಸ್ತುಮೆನುತಾಡುವರಲ್ಲದೆ ಪೇಳ್ದರಿಲ್ಲವೀ
ಧಾರಿಣಿಗತ್ಯಧಿಕ್ಯ ಸುಮಹಸ್ಥಲಪೂರ್ವಕಮಂ ನಿಮಿರ್ಚಿದೆಂ
ಶೂರರುದಾರರೊಲ್ದು ಸಲೆ ಕೇಳ್ವುದು ಪೇಳ್ವುದು ಬಾಳ್ವುದಳ್ಕಱಿಂ ||

ಶ್ರೀಮದ್ರಾಜಾಧಿರಾಜಂ ರಜತಗಿರಿವರಂ ರಾಜರಾಜಪ್ರಸೇವ್ಯಂ
ಸೋಮಾರ್ಕಶ್ರೇಯಸಾಕ್ಷಂ ಸುರನರಭುಜಗಾಧೀಶ ಭೂಭೃದ್ಧರಂ ಸು
ತ್ರಾಮಂ ಬ್ರಹ್ಮಾಸುರಾದ್ಯರ್ಭಕುತಿರತಿಯೊಳೋಲ್ಕೈಸಲೊಪ್ಪಿರ್ದನಾರ್ಯಾ
ವಾಮಂ ವಂದ್ಯಪ್ರಸನ್ನಂ ಹರಿಣಪುರವರಂ ಶಾಂತಮಲ್ಲೇಶಲಿಂಗಂ ||

ವೀರವೃಷೇಶ ಭೃಂಗಿ ಗಜವಕ್ತ್ರಷಡಾನನ ಗಂಗೆವಾಳುಕ
ರ್ದಾರುಕರೇಣುಕಾರ್ಯಮರಭಕ್ತಮಹೇಶ್ವರರುದ್ರ ಷೋಡಶ
ರ್ತೇರಸರಾಧಿಯಾದ ಪ್ರಮಥರ್ಬಳಸೊಪ್ಪಿರಲದ್ರಿಜಾಮನೋ
ಹಾರನುದಾರ ಶಂಭು ಶಶಿಶೇಖರನೊಪ್ಪಿದನಾ ಸಭಾಂತದೊಳ್ ||

ಸರ್ಪಾಧೀಶ್ವರಕಂಕಣಂ ಸಕಲಲೋಕಾಧೀಶ ಸರ್ವೇಶ ಕಂ
ದರ್ಪತ್ರೈಪುರದಕ್ಷಕಾಲಮಥನಂ ತ್ರೈಲೋಕಮಂ ಪಾಲಿಸಲ್
ಯೆಪ್ಪತ್ತೇಳ್ವಿನಿಯೋಗದಿಂದರಸುಗೈವುತ್ತೋಲಗಂಗೊಟ್ಟು ತಾ
ನೊಪ್ಪುತ್ತಿರ್ದನದೇನುಘೇವುಘೆಯೆನಲ್ ಶ್ರೀಶಾಂತಮಲ್ಲೇಶ್ವರಂ ||

ಕಂ || ದೇವಾತ್ರಿಗೋತ್ರಮಾಣಿಕ
ದೇವಂ ಪೊಮ್ಮೆಂದ್ರದೇವ ಬಂದುಗೆದೇವಂ |
ಭೂವರ ಪಿರುಮಾಳ್ದೇವ ಸು
ಭಾವ ಪಿರಿಯೊಡೆಯರಾಳ್ದರಾ ಪುರವರಮಂ ||

ಪಿರಿಯಂ ರಾಜಮಹೀಶ ಗೋವಣಧರಾಧೀಶೋನ್ನತಸರ್ೋಮ ಭೂ
ವರ ರಾಜೇಂದ್ರನುದಾರಗೋವಣನರೇಶಂ ಕೆಂಪರಾಜೇಂದ್ರ ಸಂ
ಗರಧೀರಂ ಬಸವೇಂದ್ರ ಭೂಪತನುಜಂ ಶ್ರೀವೀರರಾಜೇಂದ್ರ ಸೌಂ
ದರಹಾರಂ ಕ್ರಮದಿಂ ತತ್ಪುರಮನಾಳುತ್ತಿರ್ದರುತ್ಸಾಹದಿಂ ||

ಗೌರಪಾಚಾರ್ಯಬಸವಾಂಕ ವಿರಚಿತ

೨೩ ಕಲ್ಯಾಣ ಶತಕ (ಸು. ೧೫೮೦)

ಸ್ಥಿರಗಂಭೀರಗುಣಾಬ್ಧಿ ಸಂಗಮ ಸುಭಾಷಾ ಸತ್ಸುಧಾಶೋಭಿದಾ
ಳ್ದಿರೆ ಗಂಗಾಧರನೆಂಬರಾಮುತಸಿಕತೂಪೊಳ್ವಾಣರಾ ದೇವನಾ
ವರಪುತ್ರಂ ಗುರುಲಿಂಗ ಜಂಗಮ ಸಪರ್ಯಾಚಾರ್ಯ ಸಚ್ಛೀಲವಾಂ
ತುರು ಗಂಗಾಧರದೇವರಿರ್ಪ್ಪರೊಲವಿಂ ತತ್ಪುತ್ರರೇ ಭಾವಿಸಲ್ ||

ಶ್ರೀಮತ್ಸಜ್ಜನ ಸತ್ಯಶುದ್ಧ ಲಸದಾಚಾರ ಕ್ರಿಯಾಸಾರವಿ
ಶ್ರಾಮಾಧಾರ ಸುಧೀಜ ಸಂವಿದಮಳಾನಂದ ಪ್ರಭಾಪೂರ ಹೃ
ದ್ರಾಮಾಂಭೋರುಹ ಕರ್ಣಿಕಾರುಚಿರ ಪೀಠಸ್ಥಾನದೊಳ್ ಶಂಕರಂ
ಪ್ರೇಮಂಬೆತ್ತಿರೆ ಗೌರಪಾರ್ಯರೆಸೆದರ್ ತತ್ಪುತ್ರನೇ ಕೋವಿದಂ

ಸರಸಂ ಶ್ರೀಮದಜಾತಮೂರ್ತಿ ಕರಸಂಜಾತಂ ವೃಷಾಂಕಂ ಶಿವಾ
ವರ ಭೃತ್ಯಾನುಗಭೃತ್ಯಪದರಕ್ಪಾರೇಣು ಸಂದೋಹಬಂ
ಧುರಭಾಳಂ ಶಿವಮಂತ್ರವಸ್ತುವಿಲಸಜ್ಜಿಹ್ವಾವಸಂ ಮಾಡಿದೀ
ಗುರುಕಲ್ಯಾಣ ಮಹೇಶ್ವರಾಂಕ ಶತಕಂ ತಾನಿರ್ಕೆ ಕಲ್ಪಾಂತರಂ ||

ಪರರಂ ನಿಂದಿಸುವನ್ನೆಗಂ ಮದದ ತ್ರಾಣಂ ಕ್ರೋಧದೊಳ್ವೀಡು ಮ
ತ್ಸರದಾಡುಂಬೊಲವಾಸೆಯಿರ್ಪ ನೆಲೆ ಲೋಭಕ್ಕಾಗರಂ ಮೋಹದಾ
ವರಣಂ ಕಾಮದ ಸೀಮೆ ಪಾಪದ ಪುರಂ ದುಃಖೌಘದಂತಃಪುರಂ
ಹರುಷಂ ಮಿಕ್ಕದನಿಲ್ಲಮಾಡಿ ಸಲಹಾ ಕಲ್ಯಾಣದೇವಾಗ್ರಣೀ ||

ಜನಮೆಲ್ಲಂ ಮೆಚ್ಚೆ ಶುದ್ಧಂ ಮನಮದು ಪಿರಿದುಂ ಮೆಚ್ಚಲೇಂ ಶುದ್ಧನಲ್ತೇ
ಧನಮೊಂದಲ್ ನಿಸ್ಪೃಹತ್ವ[ಂ]ದೊರಕದು ಧನಮಿಲ್ಲಾಗಿರಲ್ ನಿಸ್ಪೃಹಂ ಕ
ಮ್ಮನೆ ಮಾತಿಂ ಜಾಣ್ಮೆಯುಂಟಲ್ಲದೆ ನಡೆಯೊಳೆ ಜಾಣಿಲ್ಲ ವೇಷಂ ಘನಂ ನೆ
ಟ್ಟನೆ ಭಾಷಾಹೀನನೇಕಾಂತಕೃತದುರಿತನಂ ಕಾಯ ಕಲ್ಯಾಣದೇವಾ ||

ನವಲಾವಣ್ಯದ ನೀಱಿ ಬಾರ ರತಿಚಿಂತಾರತ್ನವೆ ಬಾರೆನು
ತ್ತವೆ ತಳ್ಕೈಸುತಮೊಲ್ದು ಗಲ್ಲವಿಡಿದೊಳ್ಮುತ್ತಿತ್ತು ಬಿಂಬೋಷ್ಠಮಂ
ಸವಿಯಲ್ ಬಳ್ಸೊಗಸೇಱಿಂ ಕಣ್ಗಳನೆ ಮುಚ್ಚಲ್ ಜುಮ್ಮ್ರ ದಟ್ಟೈಲ
ಸುವುತ್ಸವದೊಳ್ಪೆಚ್ಚ್ರದೆಯಂ ತ್ವದಂಘ್ರಿಯೊಳೆ ಕೂಡಿಂ ಕಲ್ಯಣಾಧೀಶ್ವರಾ ||

ಸ್ಥಿರಲಿಂಗಜ್ಯೋತಿಯಂ ಮೆಲ್ಲೆ ದರ್ಪಣಿತೆಯೊಳಿಂಬಿಟ್ಟು ಸದ್ಭಕ್ತಿವರ್ತಿ
ಸ್ಫುರಿಸಲ್ ವೈರಾಗ್ಯತೈಲಂಗಱಿಯುತೆ ರುಚಿರಜ್ಞಾನ ದಿವ್ಯಪ್ರಕಾಶೋ
ತ್ಕರಮಾಗಲ್ ಜೀವಭಾವೋತ್ಕಟಮೆನಿಪ ತಮಂ ಪೋಗೆ ಮಂತ್ರಾಧಿರಾಜಂ
ವರಜಿಹ್ವಾಪೀಠದೊಳ್ಕೀರ್ತಿಸೆವುತೆ ವಿಲಸನ್ಮುಕ್ತಿ ಕಲ್ಯಾಣದೇವಾ ||

ಕೊಡದೊಳ್ನೀರಿರಲಗ್ನಿ ತಾಂ ಪೊಱಗಿರಲ್ ಸಂಸರ್ಗದಿಂದುಷ್ಣಮಂ
ಪಡೆಗುಂ ಜೀವಗುಣಂಗಳೇನೊಳಗಿರಲ್ಲಿಂಗಾಂಗ ಸಂಯೋಗದಿಂ
ಪಡೆಗುಂ ಚಿತ್ಕಲೆಯಂ ತದಗ್ನಿಮುರಿಯಲ್ ನೀರಿಂಗುತಗ್ನಿತ್ವಮಂ
ಪಡೆದಂತಾ ಗುರುಲಿಂಗಜಂಗಮ ಸಪರ್ಯಾಮೋದ ಸದ್ಭಾವಮು
ಗ್ಗಡಮಾಗಲ್ ನಿಜಲಿಂಗಮಪ್ಪುದೆ ಪಲಂ ಕಲ್ಯಾಣದೇವಾಗ್ರಣೀ ||



## ೩ ಚಂದ್ರಕವಿ ಸ್ತುತಿಸಿರುವ ಪ್ರೌಢದೇವರಾಯ

ವಿಜಯನಗರ ಸಾಮ್ರಾಜ್ಯವನ್ನಾಳಿದ ಸಂಗಮವಂಶದ ರಾಜರಲ್ಲಿ ಬಹು ಪ್ರಖ್ಯಾತನಾದ ಇಮ್ಮಡಿ ದೇವರಾಯನು ವಿಜಯರಾಯನ (ಕ್ರಿ. ಶ. ೧೪೧೩-೪೯) ಹಿರಿಯಮಗ. ಆತನಿಗೆ ದೇವರಾಯ, ಪ್ರೌಢದೇವರಾಯ, ಪ್ರೌಢಪ್ರತಾಪ ದೇವರಾಯ ಎಂಬ ಬೇರೆ ಹೆಸರುಗಳೂ ಇದ್ದುವು. 'ಗಜವೇಂಟಿಕಾಱ' ಎಂಬ ಬಿರುದಿನಿಂದ ಪ್ರಸಿದ್ಧಿಹೊಂದಿದ್ದ ಈ ಪ್ರೌಢದೇವರಾಯನನ್ನು ಚಂದ್ರಕವಿ ತನ್ನ ಎರಡು ಕೃತಿಗಳಲ್ಲಿಯೂ ಕೊಂಡಾಡಿದ್ದಾನೆ. ಪ್ರೌಢದೇವರಾಯನ ಮಹಾಪ್ರಧಾನ ನಾದ ಗುರುರಾಯನ ಉಪದೇಶದಂತೆ 'ವಿರೂಪಾಕ್ಷಾಸ್ಥಾನ'ವನ್ನೂ, 'ಶಂಕರಶತಕ' ವನ್ನೂ ತಾನು ರಚಿಸಿದುದಾಗಿ ಆಯಾಯಾ ಕೃತಿಗಳಲ್ಲಿ ಹೇಳಿರುವ ಕಾರಣ ಚಂದ್ರ ಕವಿ ಗುರುರಾಯನ ಸಮಕಾಲಿಕನೂ ಹೌದು, ದೇವರಾಯನ ಸಮಕಾಲಿಕನೂ ಹೌದು.

ಈ ಗಜವೇಂಟಿಕಾಱ ದೇವರಾಯನ ರಾಜ್ಯವೈಭವದ ವಿಸ್ತಾರವನ್ನೂ ಸೈನ್ಯ ಸಂಪತ್ತಿನ ಸೀಮೆಯನ್ನೂ, ಕಲಾಪ್ರೌಢಿಮೆಯ ಮೇರೆಯನ್ನೂ ಕೀರ್ತಿಯ ಅಪಾರ ವ್ಯಾಪ್ತಿಯನ್ನೂ ಕಣ್ಣಾರೆ ಕಂಡು ಮನಮೆಚ್ಚಿ ಆತನ ವ್ಯಕ್ತಿತ್ವದ ಪ್ರಭಾವವನ್ನು ಕವಿ ಹೀಗೆ ಕೊಂಡಾಡಿದ್ದಾನೆ:-

ಜಲನಿಧಿ ಸೀಮೆ ರಾಜ್ಯವಿಭವಕ್ಕೆ ದಿಶಾಗಜವೆಂಟು ಸೀಮೆಮಾ  
ರ್ಬಲಕಱುವತ್ತುನಾಲ್ಕು ಕಳೆ ಸೀಮೆಯಭಿಜ್ಞತೆಗಬ್ಜಜಾಂಡಮಂ  
ಡಲವೃತಸೀಮೆ ಕೀರ್ತಿಗೆನೆ ಸೋಮಕುಲಕ್ಷಿತಿಪಾಲರಲ್ಲಿ ವೆ  
ಗ್ಗಳಿಸಿದನೆಳ್ಗೆಯಿಂ ವಿಜಯರಾಯತನೂಭವ ದೇವಭೂವರಂ ।

ಚಂದ್ರಕವಿಯ ಈ ಅಭಿಪ್ರಾಯಕ್ಕೆ ಸಮಕಾಲಿಕತೆಯ ಚಾರಿತ್ರಕ ಮಹತ್ವ ವಿದೆಯೆಂಬುದನ್ನು ಅದರ ಹಿನ್ನೆಲೆಯ ಅವಲೋಕನದಿಂದ ತಿಳಿಯಬಹುದಾಗಿದೆ.

ಪ್ರೌಢದೇವರಾಯನ ಆಳ್ವಿಕೆಯ ಕಾಲ (ಕ್ರಿ. ಶ. ೧೪೧೯-೧೪೪೬) ಸಂಗಮ ವಂಶದ ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಒಂದು ಸುವರ್ಣಯುಗ. ರತ್ನ ಸಿಂಹಾಸನದಿಂದ ಕಂಗೊಳಿಸುತ್ತಿದ್ದ ವಿಜಯನಗರ ಆ ಕಾಲದ ಪ್ರಪಂಚದ ಅಗ್ರ ಗಣ್ಯನಗರಗಳಲ್ಲಿ ಒಂದೆನಿಸಿ ವಿಶ್ವವಿಖ್ಯಾತಿಯನ್ನು ಪಡೆದಿದ್ದಿತು. ಗಿರಿನದಿಗಳ ಪ್ರಕೃತಿಸೌಂದರ್ಯದ ಹಿನ್ನೆಲೆಯಲ್ಲಿ ಭವ್ಯವಾದ ದೇವಾಲಯಗಳಿಂದಲೂ ಮನೋಹರ ವಾದ ಪುಷ್ಪೋದ್ಯಾನಗಳಿಂದಲೂ ರಮ್ಯವಾಗಿದ್ದ ವಿಜಯನಗರ ರಾಜಧಾನಿ ಇಮ್ಮಡಿ ದೇವರಾಯನ ಕಾಲದಲ್ಲಿ ಸಂತಸದ ಬೀಡಾಗಿ ಸೌಭಾಗ್ಯದಾಗರವಾಗಿತ್ತೆಂದು ವರ್ಣಿತ ವಾಗಿದೆ. ಆತನ ಆಸ್ಥಾನವನ್ನು ಅಲಂಕರಿಸಿದ್ದ ಕರ್ಣಾಟಕ, ಆಂಧ್ರ ಮತ್ತು ದ್ರಾವಿಡ ಕವಿಗಳಿಂದ ವಿಜಯನಗರ ವಿದ್ಯಾನಗರಿಯೆಂಬ ತನ್ನ ಅನ್ವರ್ಥನಾಮವನ್ನು

ಸಾರ್ಥಕಪಡಿಸಿಕೊಂಡಿತು. ೧೨ ನೆಯ ಶತಮಾನದ ಬಸವಕಲ್ಯಾಣವನ್ನು ನೆನಪಿಗೆ ತಂದ ವಿಜಯನಗರ ಭಕ್ತಿಯ ಜನ್ಮಭೂಮಿಯಾಗಿ, ವಿಜಯಕಲ್ಯಾಣವಾಗಿ ಕಂಗೊಳಿಸಿದ ಬಗೆಯನ್ನು ಪ್ರೌಢದೇವರಾಯನ ಪರಮಮಿತ್ರನೂ ದಂಡಾಧೀಶನೂ ಆದ ಕವಿ ಲಕ್ಕಣ್ಣ ತನ್ನ ಶಿವತತ್ತ್ವಚಿಂತಾಮಣಿಯಲ್ಲಿ ಹೀಗೆ ವರ್ಣಿಸಿದ್ದಾನೆ :—

ಪರಹಿತದ ಬೀಡು ಸತ್ಯದನುಡಿಯ ನಡುನಾಡು
ಕರುಣಾಬ್ಧಿಯಿಕ್ಕೆ ಕಾಮಿತ ಸುಖದ ತೆಕ್ಕೆ ಶಶಿ
ಧರನ ಸಾಮರ್ಥ್ಯದಾಗರ ಸದಾಚಾರಸದ್ಭಕ್ತಿಗಳ ಜನ್ಮಭೂಮಿ
ವುರುತರ ಶಿವಾನುಭಾವಿಗಳ ಪರಿಮಿತಗೃಹಂ
ಪಂಕಿಪರಿಗಿದು ವಿಜಯಕಲ್ಯಾಣವಾದುದೀ
ಧರೆಯೊಳೀಯೆ ದೇವರಾಜೇಂದ್ರಪುರವೆಂಬವರ ಚರಣಾಂಬುಜಕ್ಕೆ ಶರಣು ॥

ಸಾಮ್ರಾಜ್ಯವ್ಯಾಪಿಯಾಗಿ ಪಶ್ಚಿಮಸಮುದ್ರದಿಂದ ಪೂರ್ವಸಮುದ್ರದವರೆಗೆ ವ್ಯಾಪಾರಕೇಂದ್ರಗಳಾಗಿ ಹರಡಿಕೊಂಡಿದ್ದ ಸಮಸ್ತಪಟ್ಟಣಗಳ ಸಂಪತ್ತಿನಿಂದ ಕೂಡಿದ ವಿಜಯನಗರವು ಸಿರಿಯ ಬೀಡಾಗಿತ್ತು. 'ಸಮಸ್ತಪಟ್ಟಣಾಧೀಶ್ವರ'ನೆಂದೂ, 'ವಿಜಯನಗರೀ ಪುರಂದರ' ನೆಂದೂ ಕೀರ್ತಿವಂತನಾದ ದೇವರಾಯನ ಮಹದೈಶ್ವರ್ಯವನ್ನು ಹೆಚ್ಚಿಸಿದ ಯಶಸ್ಸು ವೀರ ಲಕ್ಕಣ್ಣದಂಡೇಶನಿಗೆ ಸಲ್ಲುತ್ತದೆ. ದೇವರಾಯನ ರಾಜ್ಯಭಂಡಾರಗಳಷ್ಟೇ ಅಮಿತವಾಗಿ ಧರ್ಮಸ್ಥಲಗಳೆನಿಸಿದ ದೇವಾಲಯಗಳ ಭಂಡಾರವೂ ತುಂಬಿತುಳುಕಾಡುತ್ತಿದ್ದುವು.

ಹದಿಮೂರನೆಯ ಶತಮಾನದಲ್ಲಿ ಚೋಳರ ಆಧಿಪತ್ಯವು ಪತನಗೊಂಡ ಅನಂತರ ಅನಾಯಕವಾಗಿ ಹೋಗಿದ್ದ ಹಿಂದೂಸಾಗರದಮೇಲೆ ನಿಜವಾದ ಆಧಿಪತ್ಯವನ್ನು ಸಿಂಹಳದ ತನಕ ಪುನಃಸ್ಥಾಪಿಸಿದವನೆಂದರೆ 'ದಕ್ಷಿಣಸಮುದ್ರಾಧಿಪತಿ' ಲಕ್ಕಣ್ಣದಂಡನಾಯಕ.[13] ಆತನು ಸಿಂಹಳವನ್ನು ಜಯಿಸಲು ಮಾಡಿದ ಸಮುದ್ರಯಾತ್ರೆಯ ಫಲವಾಗಿ ದೇವರಾಯನು ಸಿಂಹಳದಿಂದ ಕಪ್ಪವನ್ನು ಪಡೆದು 'ಈಟಿಮ್‌ತಿರೈಕೊಂಡ' ಎಂಬ ಬಿರುದನ್ನು ಧರಿಸಿದನು.[14] ದೇವರಾಯನ ಸಾಮ್ರಾಜ್ಯದ ವೈಭವ ಹೀಗೆ ಜಲನಿಧಿಯ ಮೇಲೂ ಹಬ್ಬಿತ್ತೆಂಬುದು ಸ್ಪಷ್ಟವಿದೆ.

ಪ್ರೌಢದೇವರಾಯನ ಮಂಡಲಾಧೀಶ್ವರರು, ದಂಡನಾಯಕರು, ಮಹಾಪ್ರಧಾನರು—ಇವರೆಲ್ಲರೂ ಕೇವಲ ರಾಜಧಾನಿಯಾದ ವಿಜಯನಗರದಲ್ಲಿಯೇ ಇದ್ದು ಆಡಳಿತವನ್ನು ನಡೆಸದೆ ಇಡೀ ಸಾಮ್ರಾಜ್ಯದ ನಾನಾಭಾಗಗಳಲ್ಲಿ ಇದ್ದುಕೊಂಡು ರಾಜ್ಯಪ್ರ-

13 Mythic Society Journal April 1926 P 267.

14 Vijayanagara Sexcentenary commemoration volume pp 176-177.

ಪಾಲನೆ, ಸಂರಕ್ಷಣೆ ಹಾಗೂ ಆಡಳಿತದ ಕಾರ್ಯಭಾರವನ್ನು ವಹಿಸಿದ್ದರೆಂಬುದು ಆ ಕಾಲದ ಶಾಸನಗಳಿಂದ ತಿಳಿದುಬರುವ ಅಂಶ.

ಇಮ್ಮಡಿದೇವರಾಯನ ತಮ್ಮನಾದ ಪ್ರತಾಪ ದೇವರಾಯನು ತನ್ನ ಪ್ರತಾಪಕ್ಕೆ ಹೆಸರಾಗಿದ್ದನು. ಪ್ರೌಢದೇವರಾಯನಿಗೆ ಬಿಲ್ವಿದ್ಯೆಯಲ್ಲಿ ಪ್ರತಾಪಶಾಲಿಯಾದ 'ವಿಜಯರಾಯ' ನೆಂಬೊಬ್ಬ ತಮ್ಮನಿದ್ದನೆಂದೂ ಶಾಸನಗಳಿಂದ ತಿಳಿದುಬರುತ್ತದೆ.[15] ಆ ವಿಜಯರಾಯನೇ 'ವೀರದೇವರಾಯಪ್ರತಾಪ ವಿಜಯ ಬುಕ್ಕರಾಯ' 'ವೀರ ಪ್ರತಾಪ ವಿಜಯಬುಕ್ಕರಾಯ' 'ವೀರಪ್ರತಾಪವಿಜಯ ಮಹಾರಾಯ' ಎಂಬ ಹೆಸರುಗಳಿಂದ ಚತುಃಸಮುದ್ರವನ್ನು ಒತ್ತಿ ಆಳುತ್ತಿದ್ದನು. ಆ ಕಾರಣ ಆತನಿಗೆ 'ಸಮುದ್ರವಾಯಾಧೀಶ್ವರ' ನೆಂಬ ಬಿರುದಿದ್ದಿತು. ಸತ್ಯಮಂಗಲದ ಶಾಸನಗಳು ಒಂದನೇ ದೇವರಾಯನ ಮಗ ವಿಜಯರಾಯನಿಗೆ ದೇವರಾಯ ಮತ್ತು ಪ್ರತಾಪದೇವ[16] ಎಂಬ ಇಬ್ಬರು ಗಂಡುಮಕ್ಕಳಿದ್ದರೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಈ ವೀರ ಪ್ರತಾಪ ವಿಜಯರಾಯನೇ ವೀರಪ್ರತಾಪರಾಯ ಅಥವಾ ಪ್ರತಾಪದೇವರಾಯನೆಂದು ಕಾಣುತ್ತದೆ. ಈ ಪ್ರತಾಪದೇವರಾಯನು ಘನಾದ್ರಿರಾಜ್ಯ ಅಥವಾ ಪೆನುಗೊಂಡೆ ರಾಜ್ಯವನ್ನು ತನ್ನ ಅಣ್ಣನಿಂದ ಪಡೆದು ಕೆಲವು ಕಾಲ ಆಳುತ್ತಿದ್ದನು.[17]

ಇಮ್ಮಡಿ ದೇವರಾಯನ ಮತ್ತೊಬ್ಬ ತಮ್ಮನಾದ ಶ್ರೀಗಿರೀಂದ್ರನು ಮರಕತ ನಗರದಲ್ಲಿಯೂ[18] ತೆರಕಣಾಂಬಿ ರಾಜ್ಯ[19] ದಲ್ಲಿಯೂ ಮಂಡಲಾಧೀಶ್ವರನಾಗಿ ಆಳುತ್ತಿದ್ದಂತೆ ಶಾಸನಗಳಿಂದ ತಿಳಿದು ಬರುತ್ತದೆ. ಆತನಿಗೆ ಶ್ರೀಗಿರಿಭೂಪಾಲ, ವೀರ ಪಾರ್ವತಿ ರಾಯ, ಶ್ರೀಗಿರಿನಾಥ ಉಡೈಯರ್ ಎಂದೂ ಹೆಸರಿದ್ದಿತು. ಪ್ರತಾಪದೇವರಾಯನು ಕೂಡ ಶ್ರೀಗಿರಿಭೂಪಾಲನ ಬಳಿಕ ಮರಕತನಗರದಲ್ಲಿ ಮಂಡಲಾಧಿಪತಿಯಾಗಿದ್ದನು. ಈ ಪ್ರತಾಪದೇವರಾಯನು ಮುಳುಬಾಗಿಲು,[20] ಬಾರಕೂರು,[21] ತೆರಕಣಾಂಬಿ,[22] ತಂಜಾವೂರು[23] ಗಳಲ್ಲಿಯೇ ಅಲ್ಲದೆ ಪೆನುಗೊಂಡೆಯಲ್ಲೂ ಆಳುತ್ತಿದ್ದಂತೆ ತಿಳಿದುಬರುತ್ತದೆ. ದೇವರಾಯನ ಮಗ ವೀರ ಹರಿಹರರಾಯ (ಹರಿಹರ III)ನು ತೆರಕಣಾಂಬಿಯಲ್ಲಿ[24]. ಸ್ವಲ್ಪಕಾಲ ರಾಜ್ಯವಾಳುತ್ತಿದ್ದನು. ಇಮ್ಮಡಿ ದೇವರಾಯನ ಇತರ ಬಂಧುಗಳಾದ ರಾಮಚಂದ್ರ ಒಡೆಯ ರಾಯಬಾಹತ್ತಮಲ್ಲ ಸಾಳುವ ತಿಪ್ಪರಾಜ, ಸಾಳುವ ಗೋಪ ರಾಜ, ಪೆರುಮಾಳ್ ದಂಡನಾಯಕ, ಈತನ ತಮ್ಮ ಮಲ್ಲಣ್ಣ–ಇವರೇ ಮೊದಲಾದ

---

15 M. A. R. 1921.
16 E. I. XVI Archaeological Survey Report : 1922.3-4.
17 Bhandarkar's commemoration Vol I: Satyamangalam plates.
18 E. I. Vol 8 P 310 (AD 1424) 19 E. C. IV Part II ch. 105 (AD 1425) 20 E. C. IX An 79 (1422), kn 65 (1429) ; E. C. X Kolar Dt part II Ml 2 (AD 1431) 21 Kar. Ins. Vol I No. 44 22 E.C. Vol IV Part II Hg 1 (AD 1430) 23 E.I. 13,1. 24 E.C. IV Ch 144 (AD 1922) ; Ch 159, Gu 24 (AD 1422).

ವರು ಸಾಮ್ರಾಜ್ಯದ ನಾನಾಭಾಗಗಳಲ್ಲಿ ಕೆಲವುಕಾಲ ಇದ್ದು ಆಡಳಿತ ನಡೆಸುತ್ತಿದ್ದರು. ಪ್ರೌಢದೇವರಾಯನ ಮಹಾದಂಡನಾಯಕನೆಂದರೆ ಲಕ್ಕಣ್ಣದಂಡೇಶ. ಆತನ ತಮ್ಮನೆ ಮಾದಣ್ಣ ದಣ್ಣಾಯಕ. ಜೈಜಿ ದಣ್ಣಾಯಕ, ವಿಠ್ಠಪ್ಪ ದಣಾಯಕ, ಪು ಯಪ್ಪ ದಣ್ಣಾಯಕ, ತಿಮ್ಮ ದಣ್ಣಾಯಕ, ಭುಜಬಲಪ್ರತಾಪ ತ್ರಿಯಂಬಕದೇವ, ಪಂತ ಮೈಲಾರ, ದೊಡ್ಡವಸಂತನಾಯಕ, ಚಂದ್ರಪ್ಪ ದಣ್ಣಾಯಕ, ವಲ್ಲಭ ದಣ್ಣಾ ಯಕನೇ ಮೊದಲಾದ ಶೂರರಾದ ದಂಡಾನಾಯಕರು ದೇವರಾಯನ ಸಾಮ್ರಾಜ್ಯ ರಕ್ಷಣೆಯ ಭಾರವನ್ನು ಹೊತ್ತಿದ್ದರು. ಅಲ್ಲದೆ ಸಾಮ್ರಾಜ್ಯದ ವಿಸ್ತರಣೆಯ ಕಾರ್ಯವನ್ನೂ ಸಾಧಿಸಿದ್ದರು.

ಹೆಸರಾಂತ ಈ ದಂಡನಾಯಕರಿಗೆ ನೆರವಾಗಿದ್ದ ಮಹಾಪ್ರಧಾನರಲ್ಲಿ ಮಲ್ಲಪ್ಪ ಒಡೆಯ ಅಥವಾ ಮಲ್ಲರಸ ಒಡೆಯ, ಪಟ್ಟಣದ ರಾಯಣ್ಣ, ಚಂದ್ರಶೇಖರ ಒಡೆಯ ನರಸಿಂಹದೇವ ಒಡೆಯ, ಪುರುಷೋತ್ತಮ ಒಡೆಯ, ಆಚರಸ ಒಡೆಯ, ದೇವರಾಯ ಉಡೈಯರ್, ನಾಗಣ್ಣ ಒಡೆಯ, ಸಾಳುವ ಶಂಭುವರಾರ್ಯ, ಭಾಸ್ಕರ, ಕಳಸ ವೀರಪಾಂಡ್ಯದೇವರಸ ಒಡೆಯ, ಭಾನಪ್ಪ ಒಡೆಯ, ಸಿರಿಗಿರಿನಾಥ ಒಡೆಯ, ಕೇಶವ ದೇವ ಒಡೆಯ, ವಿರುಪಣ್ಣ ಒಡೆಯ, ತ್ರಿಯಂಬಕದೇವನ ಮಗ ಬೈಚಣ್ಣ ಒಡೆಯ, ಪುತಯಣ ಒಡೆಯ, ನಾಗರಸ, ಸಾಳುವ ಹನುಮಂತರಾಜ, ಸಾಮಂತಾಧಿ ಪತಿ ಕೊಟ್ಟೈ ಬೊಮ್ಮಯ, ಸಾಳುವ ಶಂಕರದೇವ, ವಿನುಕೊಂಡವಲ್ಲಭರಾಯ, ಇರುಗಪ್ಪ ಒಡೆಯ—ಇವರೇ ಮೊದಲಾದವರು ಗಣ್ಯರಾದ ಸಚಿವೇಂದ್ರರು. ದೇವ ರಾಯನ ಭಂಡಾರದ ಆಡಳಿತವನ್ನು ನಡಸುತ್ತಿದ್ದ ಸಚಿವರಲ್ಲಿ ಭಂಡಾರಿ ಜಕ್ಕಣ್ಣ ಒಡೆಯ, ಭಂಡಾರದ ಅರಸಪ್ಪ ಒಡೆಯ, ಆತನ ಮಗ ರಾಯಭಂಡಾರಿ ನಾರಾಯಣ ಬಿರುದಾಂಕನಾದ ಗುರುರಾಯ ಒಡೆಯರು ಸುಪ್ರಸಿದ್ಧರಾದವರು.

ಪ್ರೌಢದೇವರಾಯನ ಆಡಳಿತಕಾಲದಲ್ಲಿ ಮೇಲೆ ತಿಳಿಸಿರುವ ಮಹಾಮಂಡ ಲೇಶ್ವರರೂ, ದಂಡನಾಯಕರೂ, ಮಹಾಪ್ರಧಾನಿಗಳೂ, ರಾಯಭಂಡಾರಿಗಳೂ ಅಲ್ಲ ಅಭಂಗ ರಾಹುತ್ತರಾಯ ಚಂದ್ರಭೂಷಣದೇವ, ಪುಲಿಗೆರೆ ಪುರವರಾಧೀಶ್ವರ ಮಹಾ ಲಿಂಗದೇವ, ಅನ್ನದಾನಿ ಮಲ್ಲಿಕಾರ್ಜುನದೇವ, ಶ್ರೀಪರ್ವತದ ಭಿಕ್ಷಾವೃತ್ತಿಒಡೆಯನೇ ಮೊದಲಾದ ವೀರಶೈವ ಷಟ್ಸ್ಥಲಾಚಾರ್ಯರು ಮಾಂಡಲಿಕರಾಗಿ ಇಲ್ಲವೆ ಪುರವರಾ ಧೀಶ್ವರರಾಗಿ ದೇವಪೃಥ್ವೀರಾಜ್ಯವನ್ನಾಳುತ್ತ ಧರ್ಮಸಾಮ್ರಾಜ್ಯದ ಗುರಿಯನ್ನು ಜನ ಸಾಧಿಸಲು ಬೇಕಾದ ಮಾರ್ಗದರ್ಶನವನ್ನು ನೀಡುತ್ತಿದ್ದರು. ಹೀಗೆ ಸಾಮ್ರಾಜ್ಯ ವಿಜಯ ಪತಾಕೆಯನ್ನು ಹಾರಿಸಿದ ಪ್ರೌಢದೇವರಾಯನ ಆಡಳಿತಕಾಲದಲ್ಲಿ ಹೊ ದೇಶಗಳಿಂದಬಂದ ಇಟಲಿಯಯಾತ್ರಿಕ ನಿಕೊಲೊಕಾಂಟಿ(1420) ಪರ್ಶಿಯಾದೇಶ ರಾಯಭಾರಿ ಅಬ್ದುಲ್ ರಜಾಕ್(1443) ಎಂಬುವರು ಕಂಡ ವಿಜಯನಗರದ ವೈಭ ಚಿರಸ್ಮರಣೀಯವಾದುದೆಂಬುದನ್ನು ಅವರ ಗ್ರಂಥಗಳು ಸ್ಪಷ್ಟಪಡಿಸುತ್ತವೆ.

ಪ್ರೌಢದೇವರಾಯನ ಆಸ್ಥಾನದಲ್ಲಿ ಕನ್ನಡಸಾಹಿತ್ಯಕ್ಕೆ ದೊರೆತ ಪ್ರೋತ್ಸಾಹ ಬಹುಮುಖವಾದುದು. 'ಭಕ್ತಿಭಂಡಾರಿ' ಯೆಂದು ಪ್ರಸಿದ್ಧನಾದ ಜಕ್ಕಣಾರ್ಯನಿಗೆ ವೀರಶೈವಾಗಮಗಳಲ್ಲಿ ಆಳವಾದ ಪಾಂಡಿತ್ಯವಿತ್ತೆಂಬುದನ್ನು ಆತನ 'ಏಕೋತ್ತರ ಶತಸ್ಥಲೀ' ಗ್ರಂಥದಿಂದ ತಿಳಿಯಬಹುದಾಗಿದೆ. ಆತನು ವೀರಶೈವ ಧರ್ಮಗ್ರಂಥಗಳ ರಚನೆಗೆ ಲಕ್ಷಗಟ್ಟಲೆ ಹೊನ್ನಿತ್ತ ಸಂಗತಿ ಪ್ರಸಿದ್ಧವಾಗಿದೆ. ಲಕ್ಕಣ್ಣದಂಡೇಶ ಸ್ವತಃ ಕವಿಯಾಗಿದ್ದವನು. ಆತನ ಶಿವತತ್ತ್ವಚಿಂತಾಮಣಿ ವೇದಾಗಮ ಪುರಾತರೋಕ್ತಿಗಳ ಸಮ್ಮತದ ಸಾರಗ್ರಂಥ. ಶಿವಧರ್ಮವನ್ನು ಸಾರಿದ ಪುರಾತನ ನೂತನರ ಕಥೆಗಳಿಂದ ಕೂಡಿ ಚಾರಿತ್ರಕ ಮಹತ್ವವನ್ನು ಹೊಂದಿದ ಆಧಾರಗ್ರಂಥ. ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಕನ್ನಡಕವಿ ಚಾಮರಸನ 'ಪ್ರಭುಲಿಂಗಲೀಲೆ' ಪ್ರಭುದೇವರ ಜೀವನದ ಸುಂದರ ರಸನಿರೂಪಣೆಯಾಗಿದೆ. ಮಹಾಲಿಂಗದೇವ, ಕುಮಾರ ಬಂಕನಾಥ, ಕಲ್ಮಠದ ಪ್ರಭುದೇವ, ಮಗ್ಗೆಯ ಮಾಯಿದೇವ, ಸಪ್ತಕಾವ್ಯದ ಗುರು ಬಸವ, ಕರಸ್ಥಲ ವೀರಣ್ಣೊಡೆಯ, ಕರಸ್ಥಲನಾಗಿದೇವ, ಗಿರೀಂದ್ರ, ಚಂದ್ರಕವಿಯ ಗುರು ಗುರುರಾಯ ಇವರೇ ಮೊದಲಾದವರು ಸಲ್ಲಿಸಿದ ಧಾರ್ಮಿಕ ಹಾಗೂ ಸಾಹಿತ್ಯ ಸೇವೆ ಅಮೂಲ್ಯವಾದುದು. ವಿಜಯನಗರ ಸಾಮ್ರಾಜ್ಯದ ಸರ್ವತೋಮುಖವಾದ ಏಳಿಗೆಯ ಪ್ರೇರಕಶಕ್ತಿಯಾಗಿದ್ಧ 'ವೀರಶೈವಾಚಾರ ಸಾರಸಂಪನ್ನ'ನೂ 'ಧರ್ಮವ್ರತ ನಿಪುಣ'ನೂ ಆದ ಪ್ರೌಢದೇವರಾಯನು ಕೇವಲ ರಾಜನಲ್ಲ; ಸದ್ಗುಣಗಳ ಗಣಿ ಎಂಬುದನ್ನು ಚಂದ್ರಕವಿ ಹೀಗೆ ಚಿತ್ರಿಸಿದ್ದಾನೆ :—

ಜನಪತಿಮಾತ್ರವೇ ಗುಣದೊಳೀಕ್ಷಿಸೆಯ್ಯೆದನೆಯಂಬುರಾಶಿಯಾ
ಙನೆಯ ಸುಪರ್ವಭೂಮಿರುಹಮೇಳನೆಯಗ್ಗದ ಚಕ್ರವರ್ತಿಯೆಂ
ಟನೆಯ ಕುಲಾದ್ರಿಯೊಂಬತನೆಯೊರ್ವ ದಿಶಾಪತಿ ಪೇಳಲೇನೊ ಪ
ತ್ತನೆಯ ವಿರಿಂಚಿಯೆಂಬುದು ಜಗಜ್ಜನವೀ ಗಜವೇಂಟಿಕಾಙನಂ||

ದೇವರಾಯನನ್ನು ಕುರಿತ ಚಂದ್ರಕವಿಯ ಈ ಗುಣಗಾನದ ವರ್ಣನೆಯಲ್ಲಿ ಅತಿಶಯೋಕ್ತಿಯಿದ್ದರೂ ಕವಿಯ ಆತ್ಮೀಯತೆಯೂ ಜನಪ್ರಿಯತೆಯೂ ತುಂಬಿದೆ ಎಂಬುದನ್ನು ಮನಗಾಣಬಹುದು. ಚಂದ್ರಕವಿಯ ಬಹುಶಃ ಮೊತ್ತಮೊದಲ ಕೃತಿಯಾದ 'ಶ್ರೀವಿರೂಪಾಕ್ಷಾಸ್ಥಾನ' ವೆಂಬ ಚಂಪೂಕಾವ್ಯದ ಆದಿಯಲ್ಲಿ ಪ್ರೌಢದೇವರಾಯನು ರಾಜ್ಯಭಾರವನ್ನು ವಹಿಸಿಕೊಂಡ ಸಂದರ್ಭವು ನಿರೂಪಿತವಾಗಿದೆ. ಆ ಕಾವ್ಯದ ರಚನಾಕಾಲಕ್ಕೆ ಆ ಸಂಗತಿ ಇನ್ನೂ ಹೊಚ್ಚಹೊಸತಾಗಿಯೇ ಇತ್ತೆಂದು ಕಾಣುತ್ತದೆ. ನಳ, ನಹುಷ, ದಶರಥ,ಸಗರ, ಹರಿಶ್ಚಂದ್ರರೇ ಮೊದಲಾದ ಪುರಾಣ ಪ್ರಸಿದ್ಧರಾದ ಮಹಾಪುರುಷರಿಗೆ ಸಮನಾದ ಈ ನರೇಂದ್ರನಿಗೆ ಪ್ರೌಢದೇವರಾಯ ನೆಂಬ ಹೆಸರಿದ್ದಿತೆಂಬುದನ್ನು ಚಂದ್ರಕವಿ ಮುಂದಿನ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ.

ನೆಗಳ್ದ ನಳ ನಹುಷ ದಶರಥ
ಸಗರ ಹರಿಶ್ಚಂದ್ರ ಮುಂಧುಮಾರ ಭಗೀರಥ।
ನೃಗ ಕಾರ್ತವೀರ್ಯ ನೃಪರೋ
ರಗೆಯೆನಿಸಂ ಪ್ರೌಢದೇವರಾಯ ನರೇಂದ್ರಂ ॥

ಆತನ ರೂಪು, ಪರಾಕ್ರಮ, ತೇಜಸ್ಸು, ತ್ಯಾಗ, ಕಲಾಪ್ರೌಢಿಮೆ, ಹಾಗೂ ಐಶ್ವರ್ಯವನ್ನು ಕೊಂಡಾಡಿರುವುದನ್ನಿಲ್ಲಿ ಕಾಣಬಹುದು :—

ಆವನ ರೂಪವಾವನ ಪರಾಕ್ರಮವಾವನ ತೇಜದೇಳ್ಗೆ ಮ
ತ್ತಾವನ ಚಾಗವಾವನ ಕಲಾವಳಿಯಾವನ ಸಂದ ಸಂಪದಂ
ಭಾವಜನಂತೆ ದಾಶರಥಿಯಂತಿನನಂತೆ ದಧೀಚಿಯಂತೆ ರಾ
ಜೀವವಿರೋಧಿಯಂತೆ ನರವಾಹನನಂತೆಸೆದಿರ್ಪುದೊಪ್ಪದಿಂ ॥

ಆನೆಯ ಬೇಟೆಯಲ್ಲಿ ಆಸಕ್ತನೂ ಯುದ್ಧದಲ್ಲಿ ನಿಸ್ಸೀಮ ಪರಾಕ್ರಮಿಯೂ ಆದ ದೇವರಾಯನು ತನ್ನೊಡನೆ ಪ್ರತಿಭಟಿಸಿ ಹೋರಾಡುತ್ತಿದ್ದ ಶತ್ರುರಾಜರುಗಳಿಗೆ ತೋರುತ್ತಿದ್ದ ಶೌರ್ಯೋದ್ದೀಪ್ತ ಔದಾರ್ಯಕ್ಕೆ ಚಂದ್ರಕವಿ ಹಿಡಿದ ನುಡಿಗನ್ನಡಿ ಈ ಕಂದ :—

ಪೊಣರ್ದೊಡೆ ನಂದನವನಮಂ
ಮಣಿದೊಡೆಯುಪವನವನಿತ್ತಲ್ಲಿದೊಡೆ ಗಿರಿವನಮಂ।
ಗಣಿಸುವಡರಿದೆನೆ ರಿಪುನೃಪ
ಗಣಕ್ಕೆ ಕುಡುತಿರ್ಪನಮನು ದೇವನೃಪಾಲಂ ॥

*3

## ೪ ಕವಿಯ ಗುರು-ಗುರುರಾಯನಾರು ?

ಚಂದ್ರಕವಿ ಅಥವಾ ಚಂದ್ರಶೇಖರಕವಿಯು ರಚಿಸಿರುವ ಪ್ರಕೃತ 'ಶಂಕರಶತಕ' ಪ್ರಬಂಧಕ್ಕೂ 'ಶ್ರೀ ವಿರೂಪಾಕ್ಷಾಸ್ಥಾನ' ಎಂಬ ಚಂಪೂಕಾವ್ಯಕ್ಕೂ ಗುರುರಾಯನೆ ಪ್ರೇರಕನೆಂಬುದು ಆತನ ಕೃತಿಗಳಿಂದಲೇ ವ್ಯಕ್ತವಾಗುತ್ತದೆ. ಆ ಗುರುರಾಯ ಚಂದ್ರ ಕವಿಯ ಕೃತಿಗಳ ಬರಿಯ ಪ್ರೇರಕಮಾತ್ರನಲ್ಲ. ಆತನ ಆಧ್ಯಾತ್ಮಿಕ ಗುರುವೂ ಆಗಿದ್ದ ನೆಂಬುದನ್ನು ಶಂಕರಶತಕದ ಈ ಪದ್ಯದಿಂದ ತಿಳಿಯಬಹುದು :—

ಸೊರಹುತಲಿಂದ್ರಚಂದ್ರನಿವನೆಂಬ ನರಸ್ತುತಿಯಲ್ಲ ಚಂದ್ರಶೇ
ಖರ ಕಪಿರಾಜ! ಭಕ್ತಿಗೆ ವಿರಕ್ತಿಗೆ ಮುಕ್ತಿಗೆ ಬೀಜಮಾಗೆ ಶಂ।
ಕರಶತಕ ಪ್ರಬಂಧಮನೆ ಪೇಳಿದನೆಂದುಪದೇವಿತ್ತ ಮ
ದ್ಗುರು ಗುರುರಾಯನಿಚ್ಚೆವಡೆ ತೀರ್ಚುವೆನೆಚ್ಚರಿ ಪೆರ್ಚುವಂದದಿಂ[25] ॥

ಹೀಗೆ ಗುರುವಿನ ಮೆಚ್ಚಿಕೆಗೂ ಉಪದೇಶಕ್ಕೂ ಪಾತ್ರನಾದ ಚಂದ್ರಶೇಖರ ಕವಿಶಿಷ್ಯ ಹೇಗೆ ಗುರುಕಾರುಣ್ಯದಿಂದ ತನ್ನ ಮತ್ತೊಂದು ರಸಕೃತಿಯನ್ನು ಮೊದಲು ರಚಿಸಿದನು ಎಂಬುದನ್ನು ನೋಡೋಣ[26] :—

"ಆ ಗುರುರಾಯನೆನ್ನನೊಲವಿಂ ನಡೆನೋಡುತೆ ಬಾ ವಚಸ್ಸುಧಾ
ಸಾಗರ ಚಂದ್ರಶೇಖರಕವೀಶ್ವರ ನೀಂ ನೆಗಳ್ದಷ್ಟಭಾಷೆಗ
ಳ್ಗಾಗರಮಾದ ಕನ್ನಡದ ಬಿನ್ನಣಮಂ ನೆಱೆ ತೋಱುವೇಳ್ಪುದಿಂ
ಪಾಗಿರೆ ಹಂಪೆಯೊಳ್ದನೆಸೆವೋಲಗಮಂ ರಚಿಸೆಂದನಳ್ತಿಯಿಂ॥

ಅಲರ್ಗಣೆಯಿಂದಿಮ್ಮಡಿ ತಂ
ಬೆಲರಿಂ ಮೂವಡಿ ಬಸಂತದಿಂ ನಾಲ್ವಡಿ ಕಾ।
ದಲರಿಂದೈವಡಿ ಮೋಹಿಪು
ದೆಲೆ ಚಂದ್ರಕವೀಂದ್ರ ನಿನ್ನ ಕನ್ನಡಕಬ್ಬಂ॥

ಎಂದಿಂತು ಸಕಲರಸಿಕಜನ ಸಾರ್ವಭೌಮನೆನಿಪ ಗುರುರಾಯ ಮಹಾಪ್ರಧಾನ ನೆನ್ನ ಪಸುಳೆತನದ ತೊದಳ್ನುಡಿಯಂ ಕೊಂಡಾಡಿ, ದೇವದೇವೋತ್ತಮನ, ವೇದ ವಿನುತನ, ಹರಿಚತುರಾನನಾದಿ ಸುರನಿಕರ ಪರಿಪೂಜಿತ ಚರಣಾರವಿಂದನ, ತುಹಿನ ಗಿರೀಂದ್ರನಂದಿನೀಮುಖಕಮಲಮಣಿಮುಕುರಮಕರಂದನ, ಶರಣಾಗತ ಚಿತ್ತ ಚಕೋರಚಂದ್ರಿಕಾಯಮಾನ ಸಾಂದ್ರತರ ಕಾರುಣ್ಯಕಟಾಕ್ಷನ ಶ್ರೀ ವಿರೂಪಾಕ್ಷನ ಆಸ್ಥಾನಮಂ ಬಿತ್ತರಿಸಿ ಕೇಳ್ವರ ಕಿವಿಗೆ ಸುಧೆಯ ಸೋನೆಯಂ ಸೈಗಱೆಯವೇಳ್ಕು ಮೆಂದೆಂಬಿನಮಾಮಾತಂ ಮನದೆಕೊಂಡು

---

25 ಪದ್ಯ : ೬. 26 ಶ್ರೀವಿರೂಪಾಕ್ಷಾಸ್ಥಾನ; ಪದ್ಯ ೧೧ ರಿಂದ ೧೪

ನುಡಿ ಕಡುನುಣ್ಪನಾಳೆ ಪದಬಂಧವಗುಂದಲೆಯಾಗೆ ಭಾವವು
ಗ್ಗಡದ ಪೊಡರ್ಪನಪ್ಪೆ ರಸವುಕ್ಕುವ ಕಾಳ್ಪುರಮಾಗೆ ದೇಸಿ ದ
ಟ್ಟಡಿಯಿಡೆ ಜಾಣ್ಮೆಪೊಣ್ಮೆ ಸಭೆ ಸೈವೆಱಗಿಂ ತಲೆದೂಗೆ ಕಬ್ಬಮಂ
ಗಡಣಿಸಿ ಹಂಪೆಯಾಳ್ದನೆಸೆವೋಲಗಮಂ ಪೊಸತಾಗಿ ಬಣ್ಣಿಪೆಂ ||

ಎಂಬ ಕವಿಯ ಈ ನಿರೂಪಣೆಯಿಂದ ಗುರುರಾಯ ರಸಿಕಚಕ್ರಿಯೆಂದೂ ಅಷ್ಟ ಭಾಷೆಗಳಿಗೆ ನೆಲೆಯಾದ ಕನ್ನಡದ ಮೃದುಮಧುರವಾದ ನುಡಿಯ ಬೆಡಗಿನಲ್ಲಿ ಆತನಿಟ್ಟ ಪ್ರೇಮ ಅನುಪಮವೆಂದೂ ವ್ಯಕ್ತವಾಗುವುದು. ಅಲ್ಲದೆ ಪಂಪಾವಿರೂಪಾಕ್ಷನಲ್ಲಿ ಆತನು ತಳೆದ ಭಕ್ತಿಭಾವ ಅದ್ವಿತೀಯವಾದುದೆಂಬುದು ಸುಸ್ಪಷ್ಟವಾದ ಸಂಗತಿ.

ಪ್ರೌಢದೇವರಾಯನ ರಾಜಸಭೆಯಲ್ಲಿ ತೇಜಃಪುಂಜನಾದ ಮಂತ್ರಿಯೆಂದರೆ ಅರಸಪಾಮಾತ್ಯತನೂಜನಾದ ಗುರುರಾಯ. ಆತನು ಅತ್ರಿಮುನಿ ಗೋತ್ರೋದ್ಭವ ನೆಂದೂ, ವಿವಿಧ ಭಾಷಾವಿಖ್ಯಾತನೆಂದೂ, ನೂತನ ಭೋಜರಾಜನೆಂದೂ ಕವಿಕುಲ ಕಲ್ಪತರುವೆಂದೂ ಸುಪ್ರಸಿದ್ಧನಾದ ವ್ಯಕ್ತಿ. ಸೌಂದರ್ಯದಲ್ಲಿ ಮಾನವಾಕಾರದ ಮನ್ಮಥನೋ ಎಂಬಂತಿದ್ದ ಆತನು 'ರಾಯಭಂಡಾರಿ ನಾರಾಯಣ' ಎಂಬ ಬಿರುದನ್ನು ಹೊಂದಿ ಕೀರ್ತಿಗಳಿಸಿದ್ದನು. ಆ ಬಗ್ಗೆ ಕವಿ ವರ್ಣಿಸಿರುವ ಬಗೆಯಿದು :—

ಇಂತೆಸೆವ ಚತುಸ್ಸಮುದ್ರಾಧೀಶ್ವರ ರಾಜಾಧಿರಾಜ ರಾಜಪರಮೇಶ್ವರ ಗಜ ಬೇಂಟೆಕಾಱ ಬಿರುದ ಪ್ರಸಿದ್ಧ ಪ್ರೌಢಪ್ರತಾಪದೇವರಾಯ ಮಹಾರಾಯನ ಸಭಾ ಸರೋಜವಾಸರೇಂದ್ರನುಂ, ಅತ್ರಿಮುನಿ ಪವಿತ್ರಗೋತ್ರಸುಧಾರ್ಣವ ಪೂರ್ಣ ಚಂದ್ರನುಂ, ನಿಜಚರಣ ಶರಣಾಗತಸಚಿವ ಸಾಮಂತಮುಖನಿಖಿಲಜನ ಸಮೂಹ ಸಮುದ್ಧರಣಧುರೀಣ ಗುಣಗಣವಿಲಸದರಸಪಾಮಾತ್ಯ ತನೂಜನುಂ, ಸಕಲ ಕಲಾ ಕೌಶಲ ನೂತನ ಭೋಜರಾಜನುಂ, ವಿವಿಧಭಾಷಾ ವಿಶೇಷವಿಖ್ಯಾತ ಕವಿಕುಲ ಕಲ್ಪ ಭೂಜನುಂ ಮಾನಿನೀಮಾನಸ ಮಾನಾಪಹರಣ ಮಾನವಮೀನಾಂಕನುಮೆನಿಸಿ ನೆಗಳ್ತೆವೆತ್ತ ಗುರುರಾಯಮಂತ್ರಿಯೊಪ್ಪುತಿರ್ಪನಂತಲ್ಲದೆಯುಂ

ಎರೆವವರ್ಗೀಯಲಾಱದೆ ದಿಗಂತಕೆ ವಿಷ್ಣುಪದಕ್ಕೆ ನಂದನಾಂ
ತರಕೆ ಬಿಗುರ್ತು ಪಾಯ್ದ ಧನದಂಗೆ ಘನಕ್ಕೆ ಸುರದ್ರುಮಕ್ಕೆ ಪೇಳ್
ಸರಿಯೆನಲಕ್ಕುಮೇ ಧರೆಯೊಳಾವಗಮೀವವನನಾರ್ತಬಂಧುವಂ
ಪರಪುರುಷಾರ್ಥ ತತ್ಪರನನೀ ಗುರುರಾಯ ಮಹಾಪ್ರಧಾನನಂ ||

ಕಮಠನ ಕರ್ಪು ಮೇರುವಿನ ಹೊಂಬೆಳಗರ್ಕನ ಕೆಂಪು ನಿರ್ಜರ
ದ್ರುಮದ ಪಸುರ್ಪು ಪಾಱಿ ಬೆಳರ್ವಣ್ಣಮೆ ಸಾಜಮಿವಕ್ಕೆದೆಂಬಿನಂ
ಸಮನಿಸಿ ಪನ್ನಗೇಂದ್ರ ರಜತಾಚಲ ಚಂದ್ರ ಸುರೇಭಕಾಂತಿಗ
ಳ್ಗಮಮ ಪೊಡರ್ಪನಾನಿಸುವುದೀ ಗುರುರಾಯನ ಸಂದ ಬೆಳ್ಪಸಂ[27] ||

27 ಶ್ರೀ ವಿರೂಪಾಕ್ಷಾಸ್ಥಾನ: ವಚನ ೮ ರಿಂದ ಪದ್ಯ ೧೦ ;

ಕಡಲುಡೆಯಾದ ಧಾರಿಣಿಯೊಳೊರ್ವನೆ ಬಲ್ಲವನೊರ್ವನೇ ದಿಟಂ
ಕೊಡುವವನೊರ್ವನೇ ಪರಹಿತ ಪ್ರತಿಪಾಲಕನೊರ್ವನೇ ಜಸಂ
ಬಡೆದವನೊರ್ವನೇ ಸಕಲಸದ್ಗುಣ ಸಾಗರನೆಂಬ ಮೈಮೆ ಕ
ನ್ನಡಿಸಿಕೆ ಮತ್ತ ದೇವೊಗಳ್ವೆನಾಂ ಗುರುರಾಯ ಮಹಾಪ್ರಧಾನನಂ28 ||

ಹೀಗೆ ಜ್ಞಾನಿಯೂ, ದಾನಿಯೂ, ಪರೋಪಕಾರಿಯೂ ಸದ್ಗುಣಸಾಗರನೂ ಆದ ಗುರುರಾಯನು ಇಮ್ಮಡಿ ದೇವರಾಯನ ಭೂಪರಿವೃತರಾದ ಮಂತ್ರಿಗಳಲ್ಲೆಲ್ಲ ಮಹೋನ್ನತವಾದ ವ್ಯಕ್ತಿತ್ವವನ್ನು ಗಳಿಸಿದವನು. ವಿಭೂತಿಪುರುಷನ ಗುಣಸಂಪನ್ನತೆಯನ್ನು ಚಿತ್ರಿಸಿರುವ ಬಗೆಯಿದು29—

ತರುಗಳೊಳೆಂತು ಕಲ್ಪತರುವದ್ರಿಗಳೊಳ್ಕನಕಾದ್ರಿಯೆಂತು ದಿ
ಕ್ಕರಿಗಳೊಳೆಂತು ದೇವಕರಿಯಬ್ಧಿಗಳೊಳ್ಕಲಶಾಬ್ಧಿಯೆಂತು ಭೂ
ಪರಿವೃತ ದೇವರಾಯನ ಮಹಾಸಚಿವೇಂದ್ರರೊಳೊಪ್ಪುತಿರ್ಪನಂ
ತರಸಪಮಂತ್ರಿಸೂನು ಗುರುರಾಯ ಮಹಾಸಚಿವೇಂದ್ರಚಂದ್ರಮಂ ||
ಅನವರತಂ ಪರೋಪಕೃತಿಗೆಯ್ಯುತೆ ತಾನಿರೆ ಹೆತ್ತ ತಂದೆಯಂ
ನೆನೆಯದು ಬೇಡಿದಾಗಳೊಸೆದೀವುತ ತಾನಿರೆ ಪೂಣ್ದ ವಿತ್ತಮಂ
ನೆನೆಯದು ಸತ್ಕೃತಾದಿಯನೊಡರ್ಚುತೆ ತಾನಿರೆ ದುಷ್ಕೃತಾದಿಯಂ
ನೆನೆಯದು ಚಿತ್ತಮೇವೊಗಳ್ವೆನಾಂ ಗುರುರಾಯ ಮಹಾಪ್ರಧಾನನಂ ||

'ಶ್ರೀವಿರೂಪಾಕ್ಷನ ಆಸ್ಥಾನ' ವರ್ಣನೆಯ ಕಾಲಕ್ಕೆ 'ಪಸುಳೆತನದ ತೊದಳ್ನುಡಿ'ಯಿಂದ ಕೂಡಿದ್ದೆನಿಸುವ ಚಂದ್ರಕವಿಯ ಉಜ್ಜ್ವಲ ಕವಿತಾಶಕ್ತಿ 'ಶಂಕರಶತಕ'ದ ರಚನಾಕಾಲಕ್ಕೆ ತತ್ತ್ವಜ್ಞಾನಾನುಭವದಿಂದ ಮುಕ್ತಿಗಾಮಿಯಾಗಿ ಪರಿಪಕ್ವಗೊಂಡಿತೆನ್ನಬಹುದು. ಈ ದೃಷ್ಟಿಯಿಂದ ಚಂದ್ರಕವಿಯ ಉಭಯಕೃತಿಗಳಿಗೂ ಪ್ರೇರಣೆಯಿತ್ತ ಗುರುರಾಯನು ರಸಿಕಜನ ಸಾರ್ವಭೌಮನಾಗಿಯೂ, ಭಕ್ತಿಸಂಪನ್ನನಾದ ಸದ್ಗುರೂತ್ತಮನಾಗಿಯೂ ಕಂಡುಬಂದಿದ್ದಾನೆ.

ಗುರುರಾಯನ ವ್ಯಕ್ತಿತ್ವವನ್ನು ಕವಿ ಸುಂದರವಾಗಿ ಚಿತ್ರಿಸಿದ್ದಾನೆಂಬುದು ನಿಜ. ಆದರೆ ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಲಕ್ಕಣ್ಣ, ದಂಡೇಶ, ಜಕ್ಕಣಾರ್ಯ, ಚಾಮರಸರೇ ಮೊದಲಾದ ಕವಿಗಳ ಹೆಸರುಗಳಂತೆ ಗುರುರಾಯನ ಹೆಸರು ಏಕೆ ಪರಿಚಿತವಾಗಿ ಉಳಿಯಲಿಲ್ಲವೊ ತಿಳಿಯದು. ಚಂದ್ರಕವಿಯ ಕನ್ನಡ ಕೃತಿಗಳು ಮಾತ್ರ ಆತನ ಉಜ್ಜ್ವಲ ಚಾರಿತ್ರಕ್ಕೆ ಚಿರಸ್ಮರಣೀಯವಾದ ಕಾಣಿಕೆಯನ್ನು ಸಲ್ಲಿಸಿವೆ. ವಿಜಯನಗರದ ಐತಿಹಾಸಿಕ ವ್ಯಕ್ತಿಯಾದ ಈ ಗುರುರಾಯನು ಯಾರಿರಬಹುದು ಎಂದು ಕಂಡುಹಿಡಿಯಲು ಈ ಹಿಂದೆಯೇ ಶಾಸನಗಳ ಸಂಶೋಧನೆಯನ್ನು ನಡಸದೇ ಇಲ್ಲ. ಮತ್ತೆ ಕೆಲವರು 'ಗುರುರಾಯ' ಎಂಬುದು ವ್ಯಕ್ತಿಯನ್ನು

---

28 ಪದ್ಯ ೯೫ 29 ಇದೇ ಶತಕದಲ್ಲಿ ವೃತ್ತ ೮ ಮತ್ತು ೫

ಕುರಿತ ವಿಶೇಷಣವೇ ಹೊರತು ಅದು ಅಂಕಿತನಾಮವಿರಲಾರದು ಎಂದು ಭಾವಿಸಿ ಮೇಲೆಹೇಳಿದ ಕವಿಗಳಲ್ಲೊಬ್ಬನಾಗಿರಬೇಕೆಂದೂ ವಾದಿಸಿದ್ದಾರೆ.

ಶಾಲೀವಾಹನಶಕ 1380 (ಕ್ರಿ.ಶ. 1458) ಬಹುಧಾನ್ಯ ಸಂವತ್ಸರದಲ್ಲಿ ಗುರುವಪ್ಪನೆಂಬ ಹೆಸರಿನಿಂದ ಬಾರಕೂರಿನಲ್ಲಿ ಆಳುತ್ತಿದ್ದನೆಂದು ಹೇಳಿದ ವ್ಯಕ್ತಿಯೆ. ಬಹುಶಃ ಆ ಗುರುರಾಯ" ಎಂಬುದು ಡಾ|| ಎಸ್. ಶ್ರೀಕಂಠಶಾಸ್ತ್ರಿಗಳ ಅಭಿಪ್ರಾಯ.[30]

ಆಸ್ಥಾನ ವಿದ್ವಾನ್ ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು 'ಪಂಪಾಸ್ಥಾನವರ್ಣನಂ' ಎಂಬ ಕೃತಿಯ ಪ್ರಸ್ತಾವನೆಯಲ್ಲಿ "ಪ್ರಕೃತ ಕವಿಯಾದ ಚಂದ್ರ ಕವೀಶ್ವರನು ತನ್ನೀಗ್ರಂಥದಲ್ಲಿ 'ಗುರುರಾಯ ಮಹಾಪ್ರಧಾನಂ' 'ಗುರುರಾಯನ ಸಂದ ಬೆಳ್ಪಸಂ' 'ಗುರುರಾಯಮಂತ್ರಿಯೊಪ್ಪುತಿರ್ಪಂ' 'ಗುರುರಾಯ ಮಹಾಪ್ರಧಾನ ನರ್ಥಿನಿಧಾನಂ' 'ಏಂ ಪೊಗಳ್ವೆನಾಂ ಗುರುರಾಯ ಮಹಾಪ್ರಧಾನನಂ' ಎಂದು ಮೊದಲಾಗಿ ಬಣ್ಣಿಸಿರುವ ಮಹಾಪುರುಷನಾರೆಂದು ವಿಚಾರಿಸುವುದು ಅಗತ್ಯವಾಗಿದೆ. ಈ ಕವಿಯ ಕಾವ್ಯದಲ್ಲಿ ಆ ಆಶ್ರಯದಾತನ ಹೆಸರು ಸ್ಪಷ್ಟವಾಗಿ ನಿರೂಪಿತವಾಗಿಲ್ಲವಾಗಿದೆ[31] " "ನಮಗೆ ತಿಳಿದುಬಂದಿರುವಂತೆ ಪ್ರೌಢದೇವರಾಯನ ಕಾಲದಲ್ಲಿ ಮಹಾಪ್ರಧಾನನಾಗಿಯೂ ಗುರುರಾಯನೆಂಬ ಕೀರ್ತಿ ಗೌರವಗಳಿಗೆ ಪಾತ್ರನಾದವನಾಗಿಯೂ ಇದ್ದವನು ಜಕ್ಕಣಾಚಾರ್ಯನು ಮಾತ್ರ ಎಂದು ಹೇಳಬಹುದು. ಸಾಮ್ರಾಜ್ಯದ ಉನ್ನತಿಯ ಜತೆಗೆ ವೀರಶೈವ ಧರ್ಮೋದ್ಧಾರಕಾರ್ಯದಲ್ಲಿ ನಿರತನಾಗಿದ್ದ ಆಚಾರ್ಯ ಜಕ್ಕಣ್ಣನೇ ಈ ಕವಿಗೂ ಆಶ್ರಯವಿತ್ತು ಈ ಸುಂದರ ಕಾವ್ಯವನ್ನು ಬರೆಸಿರಬೇಕು."[32] ಎಂದು ಊಹಿಸಿದ್ದಾರೆ. ಪ್ರಸ್ತಾವನೆಯನ್ನು ಮುಂದುವರಿಸುತ್ತ "ಈ ಕವಿಯ ಗುರು-ಮೂರ್ತಿಶಂಕರಶತಕ ಇನ್ನೂ ಪ್ರಕಟವಾಗಿಲ್ಲ. ಆ ಗ್ರಂಥವು ತುಂಬಾ ಸ್ವಾರಸ್ಯವಾಗಿದೆಯೆಂಬುದನ್ನು ಕವಿಚರಿತ್ರೆಯ ಉಲ್ಲೇಖಗಳಿಂದ ಅರಿಯಬಹುದು"[33] "ಈ ಗುರುಮೂರ್ತಿ ಶಂಕರಶತಕವು ಅತ್ಯಂತ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನವೆನಿಸಿದೆ. ಇದನ್ನೂ ಗುರುರಾಯನಾದ ಜಕ್ಕಣಾಚಾರ್ಯರ ಪ್ರೋತ್ಸಾಹದಿಂದಲೇ ಬರೆದಂತೆ ಕವಿ ಹೇಳಿದ್ದಾನೆ.[34]" ಎಂಬಲ್ಲಿ ಅವರ ಮೊದಲ ಊಹೆ ಅಭಿಪ್ರಾಯವಾಗಿ ಸಮಾಪ್ತಿಗೊಂಡಿದೆ.

ಈ ಸಂದರ್ಭದಲ್ಲಿ ಇತರ ಕಾವ್ಯ ಹಾಗೂ ಶಾಸನಗಳಿಂದ ತಿಳಿದುಬರುವ ಸಂಗತಿಗಳನ್ನು ಒಟ್ಟುಗೂಡಿಸಿ ವಿಮರ್ಶಿಸುವುದಗತ್ಯ. ಕವಿ ಮಲ್ಲಣಾರ್ಯನ ಸಮಕಾಲಿಕನಾದ ಪ್ರಭುಗನು (ಕ್ರಿ.ಶ. ಸು 1520) ತನ್ನ 'ವೈಭೋಗ ರಾಜಾಸ್ಥಾನ'ವೆಂಬ ಚಂಪೂಕಾವ್ಯದಲ್ಲಿ ಆ ಕೃತಿರಚನೆಗೆ ಒದಗಿದ ಸಂದರ್ಭವನ್ನು ಕುರಿತು ನಿರೂಪಿಸಿದ್ದಾನೆ ಕವಿ ಮಲ್ಲಣ್ಣಾರ್ಯರೇ ಮೊದಲಾದ ರಸಿಕ ಕವೀಶ್ವರರು ಹಿಂದೆ ಗುರುರಾಯನ ಆಜ್ಞೆಯಿಂದ ಚಂದ್ರಕವಿ ವಿರೂಪಾಕ್ಷಸ್ಥಾನವನ್ನು ರಚಿಸಿದಂತೆ

30 Indian Antiquary Vol LVII—1928 Pages 77-85

31, 32 ಪುಟ ೪ 33 ಪುಟ ೫-೬ 34 ಪುಟ ೭

ನೀನೂ ನಾನಾಲಂಕಾರಚಿತ್ರಭಾವರಸಗಳಿಂದ ವೈಭೋಗ ರಾಜಾಸ್ಥಾನವನ್ನು ರಚಿಸಬೇಕೆಂದು" [35]ಹೇಳಿದ ಕಾರಣ ಆ ಕೃತಿಯನ್ನು ತಾನು ರಚಿಸಿದುದಾಗಿ ಹೇಳಿದ್ದಾನೆ. ಇಲ್ಲಿ ಚಂದ್ರಕವಿಗೆ ಕಾವ್ಯವನ್ನು ರಚಿಸುವಂತೆ ಆಜ್ಞೆಯಿತ್ತವನ ಹೆಸರು 'ಗುರುರಾಯ ಅಥವಾ ಗುರುನಾಥ[36] ಎಂದೇ ಸ್ಪಷ್ಟವಾಗಿದೆ. ಆಸ್ಥಾನ ವಿದ್ವಾನ್ ಶ್ರೀ ಬ. ಶಿವಮೂರ್ತಿ ಶಾಸ್ತ್ರಿಗಳು ಭಾವಿಸಿದಂತೆ ಗುರುರಾಯ ಜಕ್ಕಣಾಚಾರ್ಯನೇ ಆಗಿದ್ದಲ್ಲಿ ಪ್ರಭುಗನಾಗಲೀ, ಕವಿ ಮಲ್ಲಣಾರ್ಯ ಮೊದಲಾದ ಕವೀಶ್ವರರಾಗಲೀ ಜಕ್ಕಣಾರ್ಯರ ಹೆಸರನ್ನು ಹೇಳದೆ ಇರುತ್ತಿರಲಿಲ್ಲ. ಅಲ್ಲದೆ ಹೀಗೆ ಗುರುರಾಯನೆಂದು ಮಾತ್ರ ಕರೆದು ಜಕ್ಕಣಾರ್ಯರ ಹೆಸರನ್ನು ಮರೆಯಾಗಿಡಬೇಕಾದ ಪ್ರಸಂಗವೂ ಇರಲಿಲ್ಲ. ಏಕೆಂದರೆ ಅವರು ಯಾರೂ ಜಕ್ಕಣಾರ್ಯರ ಶಿಷ್ಯರಲ್ಲ. ಆದರೆ ಆ ವೀರಶೈವ ಮಹಾಪುರುಷನೇ ಮೊದಲಾದವರ ಜೀವನ ಸಂಗತಿಗಳನ್ನಾಗಲಿ ಕೃತಿಗಳನ್ನಾಗಲಿ, ಕೇವಲ ಒಂದು ಶತಮಾನದ ಅಂತರದೊಳಗಿದ್ದ ಅವರು ತಿಳಿಯದವರೇನಲ್ಲವೆಂಬುದಕ್ಕೆ ಮಲ್ಲಣಾರ್ಯರ ವೀರಶೈವಾಮೃತಮಹಾಪುರಾಣ ಗ್ರಂಥವೇ ಸಾಕ್ಷಿ. ಅದರಲ್ಲಿ ಜಕ್ಕಣಾರ್ಯನನ್ನು 'ಗುರುರಾಯ'ನೆಂದು ಕರೆಯದೆ 'ಭಂಡಾರಿ ಜಕ್ಕಪ್ಪ' ನೆಂದು ಆತನೇ ಕರೆಯದಿರುವುದನ್ನು ಕಾಣಬಹುದು[37]. ಶಾಸನಗಳಲ್ಲಿ ಕೂಡ ಆತನ ಹೆಸರು 'ಮಹಾಪ್ರಧಾನ ಜಕ್ಕಣ್ಣ ಒಡೆಯ'[38] ಜಕ್ಕರಸ ಒಡೆಯ[39] ಎಂದೇ ಇವೆಯೆಂಬುದನ್ನು ಗಮನಿಸುವುದಗತ್ಯ. ವೀರ ಪ್ರತಾಪದೇವರಾಯನ ಆಳ್ವಿಕೆಯ ಶಕ 1369ರ ಪ್ರಭವಸಂವತ್ಸರದ ವೈಶಾಖಶುದ್ಧ 15 (ಕ್ರಿ. ಶ. 1447 ರ ಏಪ್ರಿಲ್ 30) ರಂದು ಹುಟ್ಟಿದ ಕುಂದಾಪುರದ ಬಳಿಯ ಕೋಟನಾಥ ದೇವಾಲಯದಲ್ಲಿನ ಶಿಲಾಶಾಸನವೊಂದು[40] ಗುರುರಾಯನ ಬಗೆಗೆ ಹೆಚ್ಚು ಬೆಳಕು ಬೀರುವ ಸಂಗತಿಗಳನ್ನೊಳಗೊಂಡಿದೆ. ಬಾರಕೂರನ್ನಾಳುತ್ತಿದ್ದ ರುಪ್ಪಣ್ಣ ಒಡೆಯರು ಶ್ರೀ ವೀರ ಪ್ರತಾಪದೇವರಾಯರ ನಿರೂಪದಂತೆ ಶ್ರೀ ಕೋಟನಾಥದೇವರಿಗೆ ಕೊಟ್ಟ ಆ ಧರ್ಮಶಾಸನದಲ್ಲಿ ದೇವರಾಯ ಮಹಾರಾಯರ ಹೆಸರ ಧರ್ಮವಾಗಿ ಭಂಡಾರದ ಗುರುರಾಯ ಒಡೆಯರು ಶ್ರೀ ಕೋಟನಾಥ ದೇವರಿಗೆ ದರುಶನಕೆ ಬಂದಲ್ಲಿ ಮಾಡಿದ

---

35† ಕರ್ಣಾಟಕ ಕವಿಚರಿತೆ. ಸಂಪುಟ ೨, ಪುಟ ೨೦೦

36‡[ಭೂ]ನಾಥಂ ಗುರುನಾಥನಂ ಬೆಸಸ [ಲ] ತ್ಕಂತಂ ವಿರೂಪಾ[ಕ್ಷನಾ]
ಸ್ಥಾನಾಧಿಕ್ಯಮನೆಂತು ಚಂದ್ರಕವಿ ಪೇಳ್ದಂ [ಚಂ]ದದಿಂದಂತೆ [ನೀಂ]
ನಾನಾಲಂಕೃತಿ ಚಿತ್ರಭಾವರಸದಿಂ ವೈಭೋಗರಾಜೇಶನಾ
ಸ್ಥಾನ ಶ್ರೀಯನನೂನರಾಗಮೆಸೆಯಲ್ ಪೇಳೆಂದು ವಾಜ್ಞಾಪಿಸಲ್ ॥ ॥ ೧೨ ॥
ವೈಭೋಗರಾಜಾಸ್ಥಾನ—

37* ವೀರಶೈವಾಮೃತ ಮಹಾಪುರಾಣ ;—ಕಾಂಡ ೮ ಸಂಧಿ ೨೨ ಪದ್ಯ ೫೨

38 & 39 ; M. E. R. No. 334/1931.32 and No. 3577/1930.31

40 South Indian Inscriptions (Texts) IX part II. No. 451

ಧರ್ಮದ ವಿವರವೂ ಅದೇ ಗುರುರಾಯ ಒಡೆಯರು ಮಾಡಿಸಿದ ಮಠದಲ್ಲಿ ನಡೆಯು ತ್ತಿದ್ದ ಛತ್ರಕ್ಕಾಗಿ ದೇವರಾಯರ ಹೆಸರಿನಲ್ಲಿ ಕೋಟನಾಥ ದೇವರ ಸನ್ನಿಧಿಯಲ್ಲಿ ಅವರು ಧಾರೆಯೆರೆದ ಧರ್ಮದ ಸಂಗತಿಯೂ ನಿರೂಪಿತವಾಗಿದೆ. ಗುರುರಾಯನ ದೈವಭಕ್ತಿ, ಧರ್ಮಾನುರಾಗವನ್ನು ಎತ್ತಿ ಹಿಡಿಯುವ ಈ ಶಾಸನದಲ್ಲಿ ಉಕ್ತನಾದ 'ಭಂಡಾರದ ಗುರುರಾಯ ಒಡೆಯನೂ ಚಂದ್ರಕವಿಯಿಂದ ಸ್ತುತ್ಯನಾದ 'ಗುರು ರಾಯ ಮಂತ್ರಿ'ಯೂ ಒಬ್ಬನೇ ವ್ಯಕ್ತಿ ಎಂಬುದರಲ್ಲಿ ಯಾವ ಸಂಶಯವೂ ತೋರದು. ಏಕೆಂದರೆ ಚಂದ್ರಕವಿಯ ಕೃತಿಗಳಲ್ಲಿಯೂ ಈ ಶಾಸನದಲ್ಲಿಯೂ ಇರುವ ಹೆಸರು ಒಂದೇ ಆಗಿದೆ. ಅಲ್ಲದೆ ಶಾಸನದಲ್ಲಿರುವ 'ಭಂಡಾರದ' ಎಂಬ ವಿಶೇಷಣವು 'ರಾಯಭಂಡಾರಿನಾರಾಯಣ' ಬಿರುದಾಂಕಿತನಾದ ಕಾವ್ಯೋಕ್ತ ಗುರುರಾಯನ ಸಚಿವ ಕಾರ್ಯವಾದ ಭಂಡಾರದ ರಕ್ಷಣೆಯನ್ನೇ ಸೂಚಿಸುವುದಾಗಿದೆ. ದೇವರಾಯನು ಪ್ರಳಯಹೊಂದಿದ ಕಾಲದಿಂದ ಒಂದು ವರ್ಷಕ್ಕೆ ಸರಿಯಾಗಿ ಹುಟ್ಟಿದ ಈ ಶಾಸನ ದೇವರಾಯನ ಹೆಸರಿನಲ್ಲಿ ಭಂಡಾರದ ಗುರುರಾಯ ಒಡೆಯರು ಮಾಡಿದ ಧರ್ಮದ ವಿವರವನ್ನು ಹೊಂದಿದ ಕಾರಣ ಮಹತ್ವಪೂರ್ಣವಾಗಿದೆ. ಈ ಶಾಸನ ಡಾ|| ಶ್ರೀಕಂಠಶಾಸ್ತ್ರಿಗಳು ಸೂಚಿಸುವ ಕ್ರಿ.ಶ. 1458 ರ ಶಾಸನಕ್ಕಿಂತ ಪೂರ್ವದ್ದಾಗಿದೆ. ಅಲ್ಲದೆ ಅವರು ಹೇಳುವ ಶಾಸನದಲ್ಲಿ ಉಕ್ತನಾದ ಗುರುವಪ್ಪನು ದಂಡನಾಥನೇ ಹೊರತು ಭಂಡಾರಿಯಲ್ಲ. ಈ ಎಲ್ಲ ಕಾರಣಗಳಿಂದ ಚಂದ್ರಕವಿಯ ಗುರು–ಗುರು ರಾಯನು' ಭಂಡಾರದ ಗುರುರಾಯ ಒಡೆಯ'ನೆಂಬುದು ಸುಸ್ಪಷ್ಟವಾಗಿದೆ.

ಗುರುರಾಯನು ರಾಯಭಂಡಾರಿಯಾಗಿ ಯಾವಾಗ ಸಚಿವ ಪದವಿಗೇರಿದನು? ಅದಕ್ಕೆ ಮೊದಲು ಯಾವುದಾದರೂ ಪದವಿಯಲ್ಲಿದ್ದನೆ? ಎಂಬುದಕ್ಕೆ ಚಂದ್ರಕವಿಯ ಕಾವ್ಯಗಳಲ್ಲಿ ಯಾವ ಉತ್ತರವೂ ಇಲ್ಲ. ಇಮ್ಮಡಿದೇವರಾಯನ ಕಾಲದ ಕೆಲವು ಶಾಸನಗಳಲ್ಲಿ ಗುರುರಾಯನ ತಂದೆಯಾದ ಅರಸಪ ಮಂತ್ರಿಯ ಹೆಸರು ಉಕ್ತವಾಗಿದೆ. ದೇವರಾಯನ ಪಾದಪದ್ಮೋಪಜೀವಿಯಾದ ಅರಸಪ್ಪ ಒಡೆಯರಿಗೆ 'ಹಂಪೆಯ ರಾಯ'ನೆಂಬ ಮಗನಿದ್ದನೆಂದೂ ಆತನು ಗೋವೆ ಗುತ್ತಿಯನ್ನಾಳುತ್ತಿದ್ದನೆಂದೂ ಶೃಂಗೇರಿ ಶಾಸನ (ಕ್ರಿ.ಶ. 1430)ದಲ್ಲಿ ಹೇಳಿದೆ[41]. ಶಿಕಾರಿಪುರದ ಒಂದು ಶಾಸನ ದಲ್ಲಿ[42] (ಕ್ರಿ.ಶ. 1430) ಗೋವೆ ಚಂದ್ರಗುತ್ತಿಯನ್ನು ಆಳುತ್ತಿದ್ದವನು ಭಂಡಾರದ ಅರಸಪ್ಪನ ಮಗನೆಂದು ಸ್ಪಷ್ಟವಾಗಿ ಹೇಳಿದ್ದರೂ ಆತನ ಹೆಸರನ್ನು 'ಹಂದಿಯ ರಾಯ' ನೆಂದು ಉಲ್ಲೇಖಿಸಿದೆ. ಇವುಗಳಲ್ಲಿ ಯಾವುದು ಸರಿ? 'ಹಂದಿಯ' ಎಂಬುದು ಬಹುಶಃ ಆ ಶಾಸನವನ್ನು ಕೆತ್ತಿದವನ ಕೈತಪ್ಪಿನಿಂದಾದ ಪ್ರಮಾದ ವಿರಬೇಕು. ಇಲ್ಲವೆ 'ಹಂಪಿಯ ರಾಯ' ಎಂದು ಬರೆದಿರುವುದನ್ನು' ಹಂದಿಯ

41 M. A. R. 1934 No. 27 P. 193
42 Epigraphia carnatica Vol VII SK 40

ರಾಯ' ಎಂದು ಓದಿಕೊಂಡಿದ್ದರೂ ಇರಬಹುದು. ಈ ರೀತಿಯ ಗ್ರಹಿಕೆಗೆ ಶಿಲಾ ಲೇಖಕನ ಬರವಣಿಗೆಯ ಧಾಟಿಯೇ ಬಹುಮಟ್ಟಿಗೆ ಕಾರಣವಾಗಿರಬೇಕು. ಇಲ್ಲವೇ ಗುತ್ತಿಯ ಬಳಿಯ 'ಹಂದಿ' ಎಂಬಲ್ಲಿ ಆತನೇನಾದರೂ ಇದ್ದು ಆ ಊರಿನ ಹೆಸರಿನಿಂದ ಕರೆದಾಗ 'ಹಂದಿಯರಾಯ'ನಾಗಿರಬಹುದು. ಅದೇನೇ ಇರಲಿ, ಏಕಕಾಲದಲ್ಲಿ ಒಂದೇ ರಾಜ್ಯವನ್ನಾಳುತ್ತಿದ್ದವನು ಒಬ್ಬನೇ ಒಬ್ಬನೆಂಬುದು ಖಚಿತ. ಚಂದ್ರಕವಿ ಹೇಳುವ ಗುರುರಾಯನೇ ಗೋವೆಗುತ್ತಿಯನ್ನಾಳುತ್ತಿದ್ದನೋ ಅಥವಾ ಅರಸಪಾ ಮಾತ್ಯನ ಇನ್ನೊಬ್ಬ ಮಗನೋ ಎಂಬುದನ್ನು ಆಧಾರಗಳು ದೊರೆಯುವತನಕ ನಿರ್ಧರಿಸಿ ಹೇಳುವಂತಿಲ್ಲ. ಗುರುರಾಯನೇ 'ಹಂಪೆಯರಾಯ'ನಾಗಿದ್ದಲ್ಲಿ ಭಂಡಾರದ ಸಚಿವೇಂದ್ರನಾಗುವ ಮುನ್ನ ಆತನು ಗೋವೆ ಚಂದ್ರಗುತ್ತಿಯನ್ನಾಳುತ್ತಿದ್ದನೆನ್ನ ಬೇಕಾಗುತ್ತದೆ.

ಕವಿಗಳಿಗೆ ಆಶ್ರಯವನ್ನಿತ್ತು ಸಾಹಿತ್ಯಪೋಷಕನಾದ ಗುರುರಾಯನು ಸ್ವತಃ ಕವಿಯೆ? ವಿವಿಧ ಭಾಷಾವಿಖ್ಯಾತಿಯನ್ನು ಗಳಿಸಿದ ಆತನ ಕೃತಿಗಳಾವುವು? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಹಿಡಿಯಬೇಕಾದುದು ಅಗತ್ಯವೇ ಸರಿ. 'ಷಟ್ಸ್ಥಲಜ್ಞಾನಚಾರಿತ್ರ' ಎಂಬ ಒಂದು ಗ್ರಂಥ ಒಬ್ಬ 'ಗುರುರಾಜ'ನದೆಂದು ತಿಳಿದುಬರುತ್ತದೆ.[43] ಆ ಕೃತಿ ದೊರೆತರೆ ಅದು ಪ್ರಸ್ತುತ ಗುರುರಾಯನದೋ ಅಲ್ಲವೋ ಎಂಬುದನ್ನು ತಿಳಿಯಲು ಸಾಧ್ಯವಾಗಬಹುದು. ಸಂಸ್ಕೃತದಲ್ಲಿ 'ಗುರು ರಾಜ'ನೆಂಬ ಒಬ್ಬ ಕವಿಯಿದ್ದಾನೆ. ಪಾಲ್ಕುರಿಕೆ ಸೋಮಾರಾಧ್ಯ ಗುರುವಿನಿಂದ ಆಂಧ್ರಭಾಷೆಯಲ್ಲಿ ವಿರಚಿತವಾದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚಾರಿತ್ರವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಆತನ ಕಾಲ ಸುಮಾರು 1430 ಎಂದು ತಿಳಿದು ಬರುತ್ತದೆ[44] ಆತನ ಗ್ರಂಥದಲ್ಲಿ ಕವಿಯ ಕಾಲವಿಚಾರವಾಗಲಿ,ವಂಶಪರಂಪರೆಯಾಗಲೀ ತಿಳಿದುಬರದು. ಗುರುರಾಜ ಅಥವಾ ಗುರುರಾಡ್ದೇಶಿಕ ಎಂದು ತನ್ನನ್ನು ಕರೆದು ಕೊಂಡ ಆ ಕವಿ ಪಾಶುಪತಸಮಯ ವೀರಶೈವ ಮಠಾಚಾರ್ಯನಾಗಿದ್ದನೆಂದು ಆತನ ಕೃತಿಯಿಂದ ತಿಳಿದು ಬರುತ್ತದೆ[45]. ಚಂದ್ರಕವಿಯ ಕಾಲ(1430)ಕ್ಕೆ ಅಸದೃಶವಾದ ಪಾಂಡಿತ್ಯವನ್ನು ಹೊಂದಿ "ಕಡಲುಡೆಯಾದ ಧಾರಿಣಿಯೊಳೊರ್ವನೆ ಬಲ್ಲವನ್" ಎನಿಸಿದ್ದ ಗುರುರಾಯನೇ ಈ ಗುರುರಾಜನಾಗಿರಲು ಸಾಧ್ಯ. ಆಗ್ಗೆ ಪ್ರೌಢದೇವ ರಾಯನ ಇತರ ಮಂತ್ರಿಗಳಾದ ಲಕ್ಕಣ್ಣ ದಂಡೇಶ, ಜಕ್ಕಣಾರ್ಯ ಚಾಮರಸರಂತೆ ಗುರುರಾಯನೂ ಗ್ರಂಥರಚನೆಯನ್ನು ಮಾಡಿದ್ದನೆನ್ನಬೇಕಾಗುತ್ತದೆ.

---

43 ಕರ್ಣಾಟಕ ಕವಿಚರಿತೆ, ಸಂಪುಟ III. ಪುಟ 431 (ಅನುಬಂಧ)

44 Mysore Gazetteer Vol II P. 412

45 ಎಸ್. ಆರ್. ಕಂಬಸವಶಾಸ್ತ್ರಿಗಳ 'ಭಾವಮಂಜರಿ' ಎಂಬ ಟಿಪ್ಪಣಸಹಿತವಾದ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಂ. ಪುಟ ೪೪೬

## ೫ ಮೂಲಪಾಠ

ಚಂದ್ರಕವಿಯ ಪ್ರಕೃತ ಶಂಕರಶತಕವನ್ನು ಮೂರು ಓಲೆಗಳ ಪ್ರತಿಗಳ ಸಹಾಯದಿಂದ ಸಿದ್ಧಗೊಳಿಸಿ ಮುದ್ರಿಸುತ್ತಿದ್ದ ಕಾಲಕ್ಕೆ ಅಸಮಗ್ರವಾದ ನಾಲ್ಕನೆಯ ಪ್ರತಿಯೊಂದು ದೊರೆಯಿತು. ಈ ಓಲೇಪ್ರತಿಗಳನ್ನು ಕ್ರಮವಾಗಿ ಕ, ಗ, ಚ, ಮೂ ಎಂದು ಕರೆಯಲಾಗಿದೆ. ' ಕ ' ಪ್ರತಿಯಲ್ಲಿ ಅನೇಕ ಬದಲಾವಣೆಗಳೂ ದೋಷಗಳೂ ಕಂಡುಬರುವುದರಿಂದ ಉಪಯುಕ್ತವಾದೆಡೆಗಳಲ್ಲಿ ಹೊರತು ಮಿಕ್ಕೆಡೆಗಳಲ್ಲಿ ಅದರ ಪಾಠಾಂತರಗಳನ್ನು ಅಷ್ಟಾಗಿ ಸ್ವೀಕರಿಸಿಲ್ಲ. 'ಕ', 'ಗ' ಪ್ರತಿಗಳೆರಡರಲ್ಲೂ ಶಕಟ ರೇಫವನ್ನು ಬಳಸಿಲ್ಲ. ಆದರೆ ಇವೆರಡರಲ್ಲಿಯೂ ಇರುವ ಪದ್ಯಗಳ ಒಟ್ಟು ಸಂಖ್ಯೆ ಒಂದೇ ಆಗಿದೆ. ಈ ಎರಡು ಪ್ರತಿಗಳಲ್ಲಿಯೂ ಇಲ್ಲದೇ ಇರುವ ಒಟ್ಟು ಎಂಟು ವೃತ್ತಗಳೂ 'ಚ' ಪ್ರತಿಯಲ್ಲಿವೆ. ಅವುಗಳಿಗೆ ಬೇರೆ ಆಕರವಿದ್ದಿರಬಹುದೆಂದು ಊಹಿಸಿದ್ದಂತೆ ಮೂಡಬಿದರೆಯ (ಮೂ) ಪ್ರತಿ ದೊರೆತು ಅದರಲ್ಲಿ 'ಕ' 'ಗ' ಪ್ರತಿಗಳಲ್ಲಿಲ್ಲದ 'ಚ' ಪ್ರತಿಯಲ್ಲಿ ದೊರೆತಿದ್ದ ಕೆಲವು ವೃತ್ತಗಳಿರುವುದು ಕಂಡುಬಂದಿತು. ಆದರೆ ಅದರ ಮೊದಲ ಮತ್ತು ಕಡೆಯ ಕೆಲವು ಓಲೇಗರಿಗಳು ನಷ್ಟವಾಗಿದ್ದುದರಿಂದ ಪದ್ಯಗಳ ಸಂಖ್ಯೆ ಎಷ್ಟೆಂಬುದು ತಿಳಿಯದಾಗಿದೆ. 'ಗ' ಪ್ರತಿಯ ಆಧಾರದಿಂದ ಸಿದ್ಧಗೊಳಿಸಿರುವ ಈ ಮುದ್ರಿತ ಗ್ರಂಥದಲ್ಲಿ 'ಚ' ಪ್ರತಿಯ ಆ ಹೆಚ್ಚಿನ ಪದ್ಯಗಳನ್ನು ಆಯಾಯಾ ಪದ್ಯಗಳಿರಬೇಕಾದೆಡೆಗಳಲ್ಲಿ ಪಾಠಾಂತರಗಳ ಜೊತೆಗೆ ಅಡಿಗೀಟಿನಲ್ಲಿ ಕೊಟ್ಟಿದೆ.

'ಕ' ಮತ್ತು 'ಗ' ಪ್ರತಿಗಳೆರಡರಲ್ಲಿಯೂ ' ಗುರುಶಂಕರೇಶ್ವರ ಶತಕ ' ದ ಐದು ಪದ್ಯಗಳು ಅಲ್ಪಸ್ವಲ್ಪ ಮಾರ್ಪಾಟುಗಳನ್ನು ಹೊಂದಿ 'ಗುರುಮೂರ್ತಿಶಂಕರಾ' ಎಂಬ ಅಂಕಿತದಿಂದ ಕಾಣಿಸಿಕೊಂಡಿವೆ. ಈ ಐದು ಪದ್ಯಗಳಲ್ಲಿ ಎರಡು ಮಾತ್ರ (ಮುದ್ರಿತಗ್ರಂಥದ ೧೭, ೮೬ನೆಯ ಪದ್ಯಗಳು) 'ಚ' ಪ್ರತಿಯಲ್ಲಿಯೂ ಬಂದಿವೆ. ಹಿರಿಯ ಕವಿಯಾದ ಶಂಕರದೇವರ ಪ್ರಭಾವ ಈ ಚಂದ್ರಕವಿಯ ಮೇಲೆ ಬಿದ್ದಿರುವುದೇ ಈ ಪದ್ಯಗಳ ಸೇರ್ಪಡೆಗೆ ಕಾರಣವಿರಬಹುದು. ಏಕೆಂದರೆ ತನ್ನ ಮೇಲೆ ಪ್ರಭಾವ ಬೀರಿದ ಹರಿಹರನ ಗಿರಿಜಾಕಲ್ಯಾಣದಿಂದ ಒಂದು ಪದ್ಯವನ್ನು ಎಲ್ಲೋ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ತನ್ನ 'ವಿರೂಪಾಕ್ಷಸ್ಥಾನ ವರ್ಣನೆ'[46] ಯಲ್ಲಿ ಸೇರಿಸಿಕೊಂಡಿರುವುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದಾಗಿದೆ. ಪೂರ್ವಕವಿಗಳ ಪದ್ಯಗಳನ್ನು ಸಂದರ್ಭಾನುಸಾರವಾಗಿ ಎಲ್ಲೋ ಒಂದೆರಡು ಕಡೆ ಅಳವಡಿಸಿಕೊಳ್ಳುವುದರಿಂದ ಕೃತಿಚೌರ್ಯವಾಗುವುದೆಂದು ಕವಿ ಭಾವಿಸಿದಂತೆ ಕಾಣುವುದಿಲ್ಲ. ಪ್ರಾಚೀನ ಕವಿಗಳ ರಚನೆಗೆ ತನ್ನ ಪದ್ಯರಚನೆಯನ್ನು ಹೋಲಿಸಿದರೆ ಅಲ್ಲಿಯೂ[47] ಒಂದಿನಿತೂ

46. ಪದ್ಯ ೫೩ 47. ಆದೇಕೃತಿಯ ಪದ್ಯ ೯೬.

ಕುಂದುಬಾರದೆಂಬುದನ್ನು ಎತ್ತಿತೋರಿಸುವುದಕ್ಕಾಗಿ ಕವಿ ಹೀಗೆ ಪೂರ್ವಕವಿ ಪ್ರಯೋಗಗಳನ್ನು ಒಮ್ಮೊಮ್ಮೆ ಮಾರ್ಪಡಿಸಿ ಅಪೂರ್ವವಾಗಿ ಸ್ವೀಕರಿಸಿರುವನೆಂದು ತೋರುತ್ತದೆ. ಈ ದೃಷ್ಟಿಯಿಂದ ಶಂಕರಶತಕದಲ್ಲಿ ಸೇರಿರುವ 'ಗುರುಶಂಕರೇಶ್ವರ ಶತಕ'ದ ಐದು ಪದ್ಯಗಳಲ್ಲಿ ಒಂದೆರಡಾದರೂ ಕವಿ ಆರಿಸಿಕೊಂಡ ಪದ್ಯಗಳಾಗಿರ ಬೇಕು. 'ಚ' ಪ್ರತಿಯಲ್ಲಿರುವ ಹೆಚ್ಚಿನ ಎಂಟು ಪದ್ಯಗಳಲ್ಲಿ ಮೂರು ನಾಲ್ಕು ಪದ್ಯ ಗಳಾದರೂ ಈ 'ಕ' 'ಗ' ಪ್ರತಿಯ ಪದ್ಯಗಳಾಗಿರಬೇಕು. ಈ ಪದ್ಯಗಳ ಲೋಪಕ್ಕೆ ಮಾರ್ಪಟ್ಟ ಮೂಲಮಾತೃಕೆಯ ಅವಲಂಬನವೇ ಕಾರಣವೆಂದು ಕಾಣುತ್ತದೆ.

'ಚ' ಪ್ರತಿ ಶಕಟರೇಫವನ್ನು ಮಾತ್ರ ಉಳಿಸಿಕೊಂಡಿದೆ. ಆದರೂ 'ಱ' ಕಾರದ ಬಳಕೆ ಅಲ್ಲಲ್ಲಿ ಎಡವಿರುವುದಕ್ಕೆ ನಿದರ್ಶನಗಳಿಲ್ಲದೆ ಇಲ್ಲ. ಮೂಲಪ್ರತಿಯ ಪಾಠವನ್ನು ತಿದ್ದಿ ಸುಧಾರಿಸಲು ಯತ್ನಿಸಿರುವುದನ್ನು ಅದರ ಕೆಲವು ವೃತ್ತಭಾಗಗಳ ಪಾಠಗಳಿಂದ ಗುರುತಿಸಬಹುದು. ಸುಲಭವಾಗಿ ಅರ್ಥವಾಗುವಂತೆ ಶಬ್ದವ್ಯತ್ಯಾಸಗಳನ್ನೂ ಅಲ್ಲಲ್ಲಿ ಮಾಡಿಕೊಂಡಿರುವುದನ್ನು ಕಾಣಬಹುದು. 'ಚ' ಪ್ರತಿ ಮೂಲಕೃತಿಯನ್ನು ಸಂಸ್ಕರಣ ಗೊಳಿಸಿದ ಆಕರವನ್ನು ಹೊಂದಿದಂತಿದೆ ಆ ಕಾರಣ ಮೂಲಕೃತಿಯ ಕೆಲವು ಪದ್ಯ ಗಳು ಅದರಲ್ಲಿ ಕೈಬಿಟ್ಟುಹೋಗಿದೆ. ಉದಾಹರಣೆಗೆ ಶತಕದ ಮೊದಲಲ್ಲಿ ಬರುವ ವಿಜಯನಗರದ ಐತಿಹಾಸಿಕ ಮಹಾಪುರುಷನಾದ ಗಜವೇಂಟೆಕಾಱ ದೇವರಾಯನ ಗುಣವರ್ಣನೆಯ ಎರಡು ಪದ್ಯಗಳು ಅದರಲ್ಲಿಲ್ಲ. ಆದರೆ ಆತನ ಭಂಡಾರದ ಒಡೆಯ ನಾದ ಗುರುರಾಯನ ಹೆಸರನ್ನುಳ್ಳ ಒಂದು (ಮುದ್ರಿತ ಪ್ರತಿಯ ೬ ನೆಯ) ಪದ್ಯವನ್ನು ಮಾತ್ರ ಅನಿವಾರ್ಯವಾಗಿ ಉಳಿಸಿಕೊಂಡು ಆತನ ವ್ಯಕ್ತಿತ್ವವನ್ನು ಕುರಿತ ಮತ್ತೆರಡು (೪, ೫ ನೆಯ) ಪದ್ಯಗಳನ್ನು ಕೈಬಿಡಲಾಗಿದೆ. ತನ್ನ ಮತ್ತೊಂದು ಕೃತಿಯಲ್ಲಿ ಈ ಇಬ್ಬರನ್ನೂ ಕೊಂಡಾಡಿರುವ ಕವಿ ಈ ಶತಕದಲ್ಲಿಯೂ ಸ್ತುತಿಸಿರಬೇಕೆಂಬುದಕ್ಕೆ 'ಚ' ಪ್ರತಿಯಲ್ಲಿಯೇ ಇರುವ ಗುರುರಾಯನನ್ನು ಹೆಸರಿಸಿರುವ ಪದ್ಯವೇ ಸಾಕ್ಷಿಯೆನ್ನ ಬಹುದು. ಶತಕದ ಉದ್ದೇಶಕ್ಕೆ ಕವಿ ನಿರೂಪಿಸಿರುವ ಈ ಐತಿಹಾಸಿಕ ವ್ಯಕ್ತಿಗಳ ಗುಣಗಾನ ಅನಗತ್ಯವೆಂದೋ ಅನುಚಿತವೆಂದೋ ಭಾವಿಸಿ 'ಚ' ಪ್ರತಿಯ ಕರ್ತೃ ಈ ಮೇಲಣ ವಿಲೋಪವನ್ನು ಮಾಡಿದ್ದಾನೆಂಬುದು ಸ್ಪಷ್ಟ- ಆದರೂ 'ಗ' ಪ್ರತಿಯಂತೆ 'ಚ' ಪ್ರತಿಯೂ ಶುದ್ಧವಾದುದೆ.

'ಚ' ಪ್ರತಿಯ ಮತ್ತೊಂದು ವೈಶಿಷ್ಟ್ಯವೆಂದರೆ ಅದರ ಸ್ಥಲವಿಂಗಡಣೆ. ಈ ಶತಕದ ಪ್ರಧಾನವಸ್ತುವಾದ ಭಕ್ತಿ, ಜ್ಞಾನ, ವೈರಾಗ್ಯಗಳಿಗೆ ಸಂಬಂಧಿಸಿದ ಪದ್ಯ ಗಳನ್ನು ಆಯಾಯಾ ಸ್ಥಲಗಳಲ್ಲಿ ಸಂಗ್ರಹಿಸಿ ಸ್ಥಲಕಟ್ಟಿನ ರೂಪವನ್ನು ಆ ಪ್ರತಿಕಾರ ಕೊಟ್ಟಿದ್ದಾನೆ. ಈ ಉದ್ದೇಶವನ್ನು ಸಾಧಿಸದ ಐತಿಹಾಸಿಕ ಸಂಗತಿಯ ನಿರೂಪಣೆಗೆ ಸಹಜವಾಗಿ 'ಚ' ಪ್ರತಿಯಲ್ಲಿ ಎಡೆಯಿಲ್ಲವಾಯಿತೆಂಬುದನ್ನು ಮನಗಾಣಬಹುದು. ಹಾಗೆ ಮೂಲಕೃತಿಯ ಕೆಲವು ಪದ್ಯಗಳನ್ನು ಬಿಟ್ಟಿದ್ದರಿಂದ ಉಂಟಾದ ವಿಲೋಪ

ವನ್ನು ಸರಿದೂಗಿಸಲು ಮಾಡಿದ ಯತ್ನವೇ ಬಹುಮಟ್ಟಿಗೆ 'ಕ' 'ಗ' ಗಳಲ್ಲಿಲ್ಲದ ಹೆಚ್ಚಿನ ಪದ್ಯಗಳು. ಆದರೂ 'ಚ' ಪ್ರತಿಯಲ್ಲಿ ಇರುವ ಒಟ್ಟು ಪದ್ಯಗಳು ೯೭ ಮಾತ್ರ.

ಮೂಡಬಿದಿರೆಯ ಅಸಮಗ್ರ ಪ್ರತಿ (ಮೂ) ಬಹುಮಟ್ಟಿಗೆ 'ಚ' ಪ್ರತಿಯನ್ನು ಹೋಲುತ್ತದೆ. ಆದರೆ ಅದು ಸ್ಥಲವಿಂಗಡಣೆಯನ್ನು ಹೊಂದದ ಕಾರಣ ಅದಷ್ಟೂ 'ಕ' ಮತ್ತು 'ಗ' ಪ್ರತಿಯ ಪದ್ಯಕ್ರಮವನ್ನೇ ಪಡೆದಿದೆ. ಹಲವಾರು ಪಾಠಾಂತರಗಳು 'ಚ' ಪ್ರತಿಯವೇ ಆದರೂ ಕೆಲವಾದರೂ 'ಕ' 'ಗ' ಪ್ರತಿಗಳ ಪಾಠಾಂತರವೇ ಆಗಿವೆ. ನಿರ್ದಿಷ್ಟವಾಗಿ ಮೂಲಪ್ರತಿಯಲ್ಲಿರುವ ಮುದ್ರಿತ ಪ್ರತಿಯ ೩೧ ನೆಯ ಪದ್ಯ ಗುರುನಂಜೇಸ್ವಾಮಿಯ 'ಕೀರ್ತಿಶತಕ' ದಲ್ಲಿಯೂ ಮೂಡಬಿದಿರೆ ಪ್ರತಿಯಲ್ಲಿಯೂ ಇದ್ದು 'ಚ' ಪ್ರತಿಯಲ್ಲಿಲ್ಲದಿರುವುದು ಅದರ ಮೇಲಣ ವಿಲೋಪವನ್ನು ಎತ್ತಿ ಹಿಡಿಯುವುದಾಗಿದೆ. ಮೂಲಮಾತೃಕೆಯಿಂದ ಭಿನ್ನವಾದ ಆಕರಗಳನ್ನು 'ಕ' 'ಗ' ಪ್ರತಿಗಳು ಮತ್ತು 'ಚ' 'ಮೂ' ಪ್ರತಿಗಳು ಹೊಂದಿದ್ದರೂ ಸ್ಥಲವಿಂಗಡಣೆಯನ್ನು ಹೊಂದದ 'ಕ' 'ಗ' ಪ್ರತಿಗಳೇ ಮೂಲದ ನಿಕಟವರ್ತಿಯಾದ ಸಮಗ್ರ ಪ್ರತಿಗಳೆನ್ನ ಬಹುದು.

## ೬ ವಿಮರ್ಶೆ

ಶಿವಭಕ್ತಿಯುಳ್ಳವರಿಗೆ, ಸಂಸಾರದೋಷಜ್ಞರಾದ ವೈರಾಗ್ಯಸಂಪನ್ನರಿಗೆ, ಮುಕ್ತಿಮಾರ್ಗಾನುಗಾಮಿಗಳಿಗೆ ಮಾತ್ರ ಈ ಶತಕ ರುಚಿಸುವುದೆಂದೂ, ರಸವನ್ನು ತ್ಯಜಿಸಿ ಕಸವನ್ನು ಹಿಡಿಯುವ ದಾರಿಬಟ್ಟಲಂತಹ ಜನರಿಗೆ, ದುರಾಸೆಯುಳ್ಳವರಿಗೆ, ದುರ್ಮದರಾದವರಿಗೆ, ದುರಾತ್ಮರೂ ದುಷ್ಟರೂ ಆದ ಮಾನವರಿಗೆ ಎಂದಿಗೂ ಸೊಗಸು ವುದಿಲ್ಲವೆಂದೂ ಚಂದ್ರಕವಿಯ ಸ್ಪಷ್ಟವಾದ ಅಭಿಪ್ರಾಯ. ಭಕ್ತಿ, ವಿರಕ್ತಿ, ಮುಕ್ತಿಗಳೇ ಆಧ್ಯಾತ್ಮಿಕ ಜೀವನದ ಸಾರಸರ್ವಸ್ವವೆಂದು ಜಗತ್ತಿಗೆ ಸಾರಿ ಜನತೆಯ ಮನಸ್ಸನ್ನು ಅವುಗಳಿಗೊಲಿಯುವಂತೆ ಮಾಡುವುದೆ ಈ ಶತಕದ ಉದ್ದೇಶ. ಈ ಗುರಿಯನ್ನು ಸಾಧಿಸುವುದರಲ್ಲಿ ಕವಿ ಯಶಸ್ವಿಯಾಗಿದ್ದಾನೆ ಎನ್ನಬಹುದು.

ಶಿವನ ಮಹಿಮೆಯನ್ನು ಸ್ತುತಿಸುವ ಮೂಲಕ ಈ ಶತಕಕಾರ ಶಿವಪಾರಮ್ಯ ವನ್ನು ಪ್ರತಿಪಾದಿಸಿದ್ದಾನೆ. ಆದರೂ ಕವಿಗೆ ತನ್ನ ಭಕ್ತಿವೊಂದೇ ಪ್ರಧಾನ, ತಾನು ಮಾಡುವ ಶಿವಸ್ತುತಿಯ ಕವಿತ್ವವಲ್ಲ. ಆ ಕಾರಣ ಈ ಶತಕದ ನೆಪದಿಂದ ತಾನು ಶಿವ ನನ್ನು ನೆನೆಯುವೆನೆಂದು ಹೇಳಿದ್ದಾನೆ. ಶಿವೈಕಭಾವದಿಂದ ತುಂಬಿದ ಕವಿಹೃದಯದ ಮಿಡಿತವೇ ಈ ಶತಕವೆಂಬುದನ್ನು ಆತನ ಮುಂದಿನ ಕೆಲವು ಉದ್ಗಾರಗಳಿಂದ ತಿಳಿಯ ಬಹುದು : 'ನಿಮ್ಮ ಮೂರ್ತಿಗಳ ಹಂಗಿನದಲ್ತೆ ಸಮಸ್ತಲೋಕದೈಸಿರಿ' 'ಕೆಱೆನೀರ ನುಂಡು ಕೊಱೆಯಂ ಪೊಗಳ್ವಂತೆ ಕೃತಘ್ನರನ್ಯದೇವರ ನುತಿಗೆಂತುಟೊ ಬಯಸಿ ಬೀಳ್ವರಲ್ಲೈ ;' 'ಸಮಸ್ತ ದೇವತಾವೃಂದದೊಳೋರ್ವರುಂ ನಿನಗೆ ಪಾಸಟಿಯಲ್ಲ ;' 'ನಿನ್ನ ಮಹತ್ವದ ಮುಂದೆ ಮತ್ತೆ ಪೇಸದೆ ಪೆಸರ್ಗೊಂಬೆನೇ ಪೆಱರ ಪೆರ್ಮೆಯನ್ ?'

ಕ್ಷೀರಸಾಗರವನ್ನು ದೇವದಾನವರು ಕಡೆದಾಗ ಹುಟ್ಟಿದ ವಿಷ ದೇವತೆಗಳನ್ನು ಅಟ್ಟಿಕೊಂಡು ಹೋಗಿ ಸುಡುವಲ್ಲಿ ಆ ವಿಷವನ್ನು ಪರಮೇಶ್ವರನು ತನ್ನ ಕಂಠದಲ್ಲಿ ಧರಿಸದೇ ಹೋಗಿದ್ದರೆ ದೇವಸತಿಯರು ತಮ್ಮ ಸೌಭಾಗ್ಯ ಸೂಚಕವಾದ ಬಳೆಗಳನ್ನು ತೊಡುವಂತಿತ್ತೆ, ಹೂಗಳನ್ನು ಮುಡಿಯುವಂತಿತ್ತೆ ಎಂಬ ಈ ಪರ್ಯಾಯೋಕ್ತಿಯ ಮೂಲಕ ಜಗದ್ರಕ್ಷಕನಾದ ಪರಶಿವನ ಪಾರಮ್ಯವನ್ನೂ ಕಾರುಣ್ಯವನ್ನೂ ಮನಮುಟ್ಟು ವಂತೆ ವರ್ಣಿಸಿದ್ದಾನೆ. ಶಿವನ ಲೀಲೆಯ ಪೌರಾಣಿಕ ಕಥಾ ಪ್ರಸಂಗಗಳನ್ನು ಸುಂದರವಾದ ಅಲಂಕಾರಗಳ ಮೂಲಕ ಚಿತ್ರಿಸುವ ಕವಿಯ ರಚನಾ ಕೌಶಲ ಸ್ತುತ್ಯವಾದುದೆ.

ಕವಿಯ ಅಭಿಮತದಂತೆ ಹರಿ, ಹರ, ಬ್ರಹ್ಮ—ಈ ಮೂವರೂ ಶಕ್ತರಾದವರೆ. ಇವರಲ್ಲಿ ಮಹಿಮರಾದವರು ಹರಿಹರರಿಬ್ಬರ. ಆದರೆ 'ಸಿನ್ನೊಳಾಂತು ಬೇರ್ವರಿದುದು ಭಕ್ತಿ ; ಕಾರಣವನಾನುಸುರೆಂ' ಎಂಬ ಆತನ ನುಡಿಯಲ್ಲಿ ಶಿವೈಕನಿಷ್ಠೆಯೂ, ಪರ ಧರ್ಮಸಹಿಷ್ಣುತೆಯೂ ಎದ್ದು ತೋರುತ್ತದೆ. ಕವಿ ಶಿವಸ್ತುತಿ ಮಾಡಿದ್ದಾನಲ್ಲದೆ

ಪರದೈವದ ನಿಂದನೆಯನ್ನಾಗಲಿ, ಪರಮತದ ಖಂಡನೆಯನ್ನಾಗಲಿ ತನ್ನ ಗ್ರಂಥದಲ್ಲಿ ಎಲ್ಲಿಯೂ ಮಾಡದಿರುವುದರಿಂದ ಆತನ ವಿಶಾಲವಾದ ಮನೋಧರ್ಮಕ್ಕೆ ಹಿಡಿದ ನುಡಿಗನ್ನಡಿ ಆತನ ಈ ಮೇಲಣ ಉಕ್ತಿಯೆನ್ನಬಹುದು.

ನಾನಾ ಜನ್ಮಗಳ ಬಳಿಕ ಪುಣ್ಯಫಲದಿಂದ ಪಡೆದ ನರಜನ್ಮದಲ್ಲಿ ಶಿವಭಕ್ತಿ ದೊರಕಿದರೆ 'ಕಬ್ಬಿನಮೇಲೆ ಜೇನು ತಾನೊಗೆದುದು; ಪೊನ್ಗೆ ಕಂಪಮರ್ದುದೆಂಬತೆಱಂ ಎಂಬ ಕವಿಯ ಈ ಅಲಂಕಾರೋಕ್ತಿಯಲ್ಲಿ ಸವಿಯಿದೆ; ಸೌರಭವಿದೆ. ಶಿವನೊಲಿದು ಕೊಟ್ಟ ಈ ಕಾಯವನ್ನು ಅಹಂಕಾರ ಮಮಕಾರಗಳಿಗೆ ಸಿಲುಕಿಸದೆ ಅದು ದೃಢವಾಗಿ ರುವಾಗಲೆ ಶಿವಪೂಜೆಯನ್ನು ಮಾಡುವುದೊಳ್ಳಿತೆಂದು ಕವಿ ಎಚ್ಚರಿಸಿದ್ದಾನೆ ನಿಶ್ಚಲವು ನಿಷ್ಕಪಟವು ಆದ ಭಕ್ತಿಯಿಂದ ಶಿವನನ್ನು ಅರ್ಚಿಸ ಬೇಕು; ಜನಮೆಚ್ಚಿಕೆಗಾಗಿ ಆಡಂ ಬರದ ಪೂಜೆಮಾಡುವ ವೇಷಧಾರಿ ಎಂದಿಗೂ ಶಿವಭಕ್ತನಾಗುವುದಿಲ್ಲವೆಂಬುದನ್ನು ಕವಿ ವಿಶದಪಡಿಸಿದಾನೆ. ಜನ್ಮಜಾಡ್ಯ ಹರಿದುಹೋಗಲು ಶಿವಾರ್ಚನೆಯೊಂದೇ ಮಾರ್ಗ ವೆಂಬುದನ್ನು ದೃಢಪಡಿಸಿದ್ದಾನೆ.

ಶೀಲ ಸದ್ಗುಣಗಳಿಂದ ಕೂಡಿ ಮೋಕ್ಷಾಪೇಕ್ಷಿಯಾದ ಮಾನವನೇ ಇಹಲೋಕದ ದೇವನೆಂದು ಸಾರಿ ಸಚ್ಚಾರಿತ್ರಕ್ಕೆ ಕವಿ ಮಹತ್ತ್ವವನ್ನು ಕೊಟ್ಟಿದ್ದಾನೆ. ಹೊಲೆಮನ ವೊಂದರಿಂದಲೇ ಈ ಸಂಸಾರದ ಬಂಧನ. ಅದರ ವಿಚಿತ್ರವಾದ ತೊಳಲಾಟಕ್ಕೆ ಇತಿ ಮಿತಿಯಿಲ್ಲ; ದುರಾಸೆಗೆ ಪಾರವಿಲ್ಲ. ಮನಸಿಜನ ಮಾಯೆಯ ಉತ್ಕಟತೆಗೊಳಗಾಗಿ ಮನಸ್ಸಿಗೆ ಶಿವಭಕ್ತಿಯೆಂಬ ಸವಿ ತೋರದು; ಹಾಗೆ ತೋರಿದರೂ ಅದರಲ್ಲಿ ನೆಲೆ ಗೊಳ್ಳದು. ಆ ಕಾರಣ ಮನಸಿಜವೈರಿಯ ಕೃಪೆಯಿದಲೆ ಆ ಚಂಚಲವಾದ ಮನಸ್ಸು ನಿಂತರೆ, ದುರಂತ ಚಿಂತೆಯನ್ನು ಬಿಟ್ಟು ಶಿವನಚಿಂತೆನೆಯಲ್ಲಿ ಮುಳುಗಿದರೆ ತಾನೆ ಶಿವ ನಾಗೆನೆ ಎಂದು ಕವಿ ಹಲವು ಬಗೆಯಲ್ಲಿ ಹಂಬಲಿಸಿರುವುದನ್ನು ನಾವು ಕಾಣಬಹುದು.

ಈ ಶರೀರ ಮುಂಗಾರಿನ ಮೋಡದಂತೆ ಅನಿತ್ಯ. ಪ್ರಾಣವು ಯಾವಾಗ ಹವ್ವನೆ ಹಾರಿಹೋಗುವುದೋ ತಿಳಿಯದು. ಆದರೂ ತಾನು ನೂರುವರ್ಷ ಬದುಕುವೆನೆಂಬ ಮಾನವನ ನಂಬಿಕೆ ಏನು ಸೋಜಿಗ! ಕನ್ನಡಿಯ ಮೇಲಳ ಉದ್ದು ಉರುಳುವಂತೆ ಬಿದ್ದುಹೋಗುವ ಈ ಶರೀರವೇ ತಾನೆಂಬ ಮೋಹದಲ್ಲಿ ಮರುಳಾಗದ ಆತ್ಮವನ್ನು ಅರಿದಾತನೆ ನಿಜಸುಖಿ. ತಾನು–ಅನ್ಯ ಎಂಬೆರಡಿಲ್ಲ, ಒಂದೇ ಎಂದರಿತು ಅಂಗವನ್ನು ಲಿಂಗದೊಳಗೆ ಒಂದುಗೂಡಿಸುವುದೇ ಸದ್ವಿವೇಕ. ಶಿವಾಗಮಜ್ಞಾನ, ನಿಜಾನುಭಾವ ಹಾಗೂ ಗುರುಕೃಪೆ–ಈ ಮೂರೂ ಆ ಗುರಿಯ ಸಾಧನೆಗೆ ಅತ್ಯಗತ್ಯವೆಂಬುದನ್ನು ಕವಿ ಸ್ಪಷ್ಟಪಡಿಸಿದ್ದಾನೆ. ಅಲ್ಲದೆ ಸಮಷ್ಟಿಜ್ಞಾನ, ಪ್ರಾಣಿದಯೆ, ಇಂದ್ರಿಯ ನಿಗ್ರಹ, ಚಿತ್ತಸಮತೆ ಹಾಗೂ ಸುಖದುಃಖಸಮಾನತೆ–ಇವು ಯಾವುವೂ ಮೊದಲೇ ಇಲ್ಲದೆ ಮುಕ್ತಿಪಥದಲ್ಲಿ ಅಡಿಯಿಟ್ಟರೆ ಮಾಯೆಯ ಆಗ್ರಹಕ್ಕೆ ತುತ್ತಾಗಬೇಕಾಗುತ್ತದೆ ಎಂದು ಕವಿ ಎಚ್ಚರಿಸ್ಸಿದ್ದಾನೆ. ಹೀಗೆ ಭಕ್ತಿ, ವಿರಕ್ತಿ ಮತ್ತು ಮುಕ್ತಿ–ಇವುಗಳ ಸ್ವರೂಪವನ್ನೂ, ಸಾಧನಕ್ರಮವನ್ನೂ ಕವಿ ಸ್ವಾನುಭವದಿಂದ ನಿರೂಪಿಸಿದ್ದಾನೆ.

'ಕೆಱಿಕನೀರನುಂಡು ತೊಱಿಕೆಯಂ ಪೊಗಳ್ವಂತೆ,' 'ನೀರಡಸಿ ಬಳಿಕ್ಕ ಬಾವಿ ಯನಗುಳ್ದಪರೇ?' 'ಕೈಯ ಕಂಕಣಕೆ ಕನ್ನಡಿಯೇ?,' 'ಶ್ವಾನನ ಕುಡಿಬಾಲ ವೇನ್ ಸಸಿನೆ ಬರ್ಪುದೆ?', 'ಸೂಸಲಾಸೆಗಿಲಿಗಳ್ ಬಲೆಯೊಳ್ ಕೆಡೆವಂತೆ,' 'ಬೂದಿಯ ಮೇಲೆ ಬಿಳ್ದ ಹವಿಯಾಗದೆ?,' 'ಎರಡಕ್ಕೆ ಬಿಟ್ಟ ಕಟುವಾಗಿ,' 'ಕಬ್ಬಿನಮೇಲೆ ಜೇನು ತಾನೊಗೆದುದು,' 'ಕನ್ನಡಿಯ ಮೇಲಣಸುದ್ದುರುಳ್ವಂತುಟು,' 'ಬಿಸಿನೀರ್ಗೆ ಬೆಚ್ಚುವೆಂ ಹುತವಹನಂ ಪೊಗಳ್ಬಗೆವನೇ!,' 'ಕುರುಡನೊಡರ್ಚೆ ಪುಲ್ಸರವಿಯಂ ಕಟು ಮೇದುದೆನಿಪ್ಪ ಪಾಂಗು,' 'ತೃಷ್ಣೆಯೆಂಬುದು ಕೆಡುವನ್ನೆಗಂ ಕುಣಿಸದೇ ನರರಂ?'—ಎಂಬಿವೇ ಮೊದಲಾದ ನಾಣ್ಣುಡಿಗಳನ್ನೂ, ತನ್ನದೇ ಆದ ಜಾಣ್ಣುಡಿಗಳನ್ನೂ ಕವಿ ಸಂದರ್ಭಾನುಸಾರವಾಗಿ ಬಳಸುವುದರ ಮೂಲಕ ತನ್ನ ಭಾವವನ್ನು ಓದುಗನ ಮನಸ್ಸಿನಲ್ಲಿ ಬೇರೂರುವಂತೆ ಮಾಡಿದ್ದಾನೆ. ಆಧ್ಯಾತ್ಮಿಕ ವಿಚಾರಗಳನ್ನು ಲೌಕಿಕ ಉದಾಹರಣೆಗಳ ಮೂಲಕ ವಿವರಿಸುವ ಕಾರಣ ಗಹನವಾದ ವಿಷಯಗಳೂ ಸುಲಭಗ್ರಾಹ್ಯವಾಗಿವೆ. ಬೆಡಗಿನ ವಚನದಂತಹ ರಹಸ್ಯೋಕ್ತಿಯ ಪದ್ಯರಚನೆಯನ್ನು ಆತನು ಮಾಡದೆ ಇಲ್ಲ. ಅದು ಕವಿಯ ತತ್ತ್ವಜ್ಞಾನದ ಮಾರ್ಮಿಕ ವರ್ಣನೆಯ ಪ್ರತೀಕ ಮಾತ್ರ. ಹರಿಹರನ ಭಕ್ತಿಯ ಆವೇಶ ಈ ಶತಕಕಾರನ ಪದ್ಯಗಳಲ್ಲಿ ಅಲ್ಲಲ್ಲಿ ಸುಳಿದರೂ ಕವಿಯ ವಿಚಾರಸರಣಿಯ ಗಾಂಭೀರ್ಯವೇ ಎದ್ದು ತೋರುವುದು. ತನ್ನ ಚಂಪೂಕೃತಿಯಲ್ಲಿ ದೇಸಿನುಡಿಗೆ ಮಾರುಹೋದ ಕವಿ ಈ ಶತಕದಲ್ಲಿ ಸಂಸ್ಕೃತ ಪದಗಳನ್ನು ಧಾರಾಳವಾಗಿ ಬಳಸಿದ್ದಾನೆ.

ಚಂದ್ರಕವಿಯ ಈ ಶಂಕರಶತಕದಿಂದ ಅಭಿನವ ವಾದಿವಿದ್ಯಾನಂದನೂ, ಗುರು ನಂಜೇಸ್ವಾಮಿಯೂ ಪದ್ಯಗಳನ್ನು ಆರಿಸಿಕೊಂಡು ತಮ್ಮ ಸಂಕಲನ ಕೃತಿಗಳಲ್ಲಿ ಸೇರಿ ಸಿರುವುದರಿಂದ ಈ ಶತಕದ ಪ್ರಾಶಸ್ತ್ಯವನ್ನು ಪ್ರಾಚೀನರೇ ಎತ್ತಿಹಿಡಿದಿದ್ದಾರೆಂಬುದು ಸ್ಪಷ್ಟವಾಗಿದೆ. ಕಾವ್ಯಮಂಜರಿಯ 'ಸುಭಾಷಿತ ಮುಕ್ತಕ ಶತಕಂ' ಎಂಬ ಸಂಕಲನ ದಲ್ಲಿ ಈ ಶಂಕರಶತಕದ ಕೆಲವು ನೀತಿಪದ್ಯಗಳು ಉದ್ಧೃತವಾಗಿರುವುದನ್ನು ಕಾಣ ಬಹುದು. ಹದಿನೈದನೆಯ ಶತಮಾನದ ಚಂಪೂ ಹಾಗೂ ಶತಕಕಾರರಲ್ಲಿ ಚಂದ್ರಕವಿ ಗಣ್ಯವಾದ ಸ್ಥಾನವನ್ನು ಪಡೆದಿದ್ದನೆಂಬುದನ್ನು ಆತನ ಕಾವ್ಯಗಳು ಬೀರಿದ ಪ್ರಭಾವ ದಿಂದ ತಿಳಿಯಬಹುದಾಗಿದೆ.

# ವಚನ ಶಂಕರ ಶತಕ

೧ ಎಲೆ ಗುರುಮೂರ್ತಿಶಂಕರನೆ, ಲಕ್ಷ್ಮೀಪತಿಯಾದ ವಿಷ್ಣು, ವಾಣೀಪತಿಯಾದ ಬ್ರಹ್ಮ, ಶಚೀವಲ್ಲಭನಾದ ಇಂದ್ರ—ಇವರುಗಳಿಂದ ಪೂಜೆಗೊಂಡ ಪಾದಕಮಲಗಳನ್ನುಳ್ಳವನು; ತನ್ನ ಕೋಪಾಗ್ನಿಜ್ವಾಲೆಗೆ ಮನ್ಮಥನನ್ನು ಪತಂಗವಾಗಿ ಮಾಡಿದನನು; ಯತಿಚಕ್ರವರ್ತಿವೃಂದದ ನಿಶ್ಚಲಚಿತ್ತವೆಂಬ ಚಕೋರ ಪಕ್ಷಿಗೆ ಚಂದ್ರನಾದವನು ಎಂದು ಈ ರೀತಿಯಲ್ಲಿ ನಿಮ್ಮನ್ನು ಸ್ತುತಿಸುತ್ತ ಸ್ಮರಿಸುವೆನು.

೨ ವಿಜಯರಾಯನ ತನುಜನಾದ ದೇವರಾಯನು ಚಂದ್ರವಂಶದ ಭೂಪಾಲಕರಲ್ಲಿ ವಿಭವೋನ್ನತನೆನಿಸಿದ್ದನು. ಈತನ ರಾಜ್ಯ ಸಂಪತ್ತಿಗೆ ಸಮುದ್ರವೇ ಸೀಮೆ; ಅರಿಭಯಂಕರವಾದ ತನ್ನ ಸೈನ್ಯಕ್ಕೆ ಅಷ್ಟ ದಿಗ್ಗಜಗಳೆ ಮೇರೆ; ಅರಿವಿಗೆ ಅರುವತ್ತು ನಾಲ್ಕು ಕಲೆಗಳೆ ಎಲ್ಲೆ; ಕೀರ್ತಿಗೆ ಬ್ರಹ್ಮಾಂಡಮಂಡಲವೃತ್ತವೆ ಅವಧಿಯೋ ಎನ್ನುವಂತಿತ್ತು.

೩ ಈತನು ನೃಪತಿಮಾತ್ರನೆ ? ಗುಣದಲ್ಲಿ ನೋಡಿದರೆ ಐದನೆಯ ಸಾಗರ; ಆರನೆಯ ದೇವತರು: ಏಳನೆಯ ಸಾರ್ವಭೌಮ; ಎಂಟನೆಯ ಕುಲಪರ್ವತ; ಒಂಬತ್ತನೆಯ ದಿಕ್ಪತಿ; ಹೇಳುವುದೇನು ? ಹತ್ತನೆಯ ಬ್ರಹ್ಮ! ಎಂದು ಈ ಗಜವೇಂಟಿಕಾರನನ್ನು ಲೋಕವೇ ಕೊಂಡಾಡುವುದು!

೪ ವೃಕ್ಷಗಳಲ್ಲಿ ಕಲ್ಪವೃಕ್ಷ, ಪರ್ವತಗಳಲ್ಲಿ ಮೇರುಪರ್ವತ, ದಿಗ್ಗಜಗಳಲ್ಲಿ ಇಂದ್ರನ ಐರಾವತ, ಸಮುದ್ರಗಳಲ್ಲಿ ಕಲಶಾಬ್ಧಿ ಹೇಗೋ ಹಾಗೆ ಭೂಮಿಯನ್ನಾವರಿಸಿದ ಪ್ರೌಢದೇವರಾಯನ ಮಹಾ ಮಂತ್ರಿ ಶ್ರೇಷ್ಠರಲ್ಲಿ ಅರಸಪ ಮಂತ್ರಿಯ ಪುತ್ರನಾದ ಗುರುರಾಯ ಮಹಾಸಚಿವೋತ್ತಮ ಮೆರೆಯುತ್ತಿರುವನು.

೫ ಎಡೆಬಿಡದೆ ಪರೋಪಕಾರವನ್ನು ಮಾಡುತ್ತ ಆ ಗುರುರಾಯ ಮಹಾಪ್ರಧಾನನ ಚಿತ್ತವು ಹೆತ್ತ ತಂದೆಯನ್ನು ನೆನೆಯದು; ಬೇಡಿದೊಡನೆ ಅಕ್ಕರೆಯಿಂದ ನೀಡುತ್ತ ಮತ್ತೆ ಕೊಡಲೊಪ್ಪಿದ ಧನವನ್ನು ನೆನೆಯದು; ಸತ್ಕಾರ್ಯವೇ ಮೊದಲಾದುವನ್ನು ಮಾಡುತ್ತ ಆತನ ಚಿತ್ತವು ಅನ್ಯರ ದುಷ್ಕಾರ್ಯವನ್ನು ನೆನೆಯದು. ಮಹಾಪ್ರಧಾನನಾದ ಆ ಗುರುರಾಯನನ್ನು ನಾನು ಏನೆಂದು ಕೊಂಡಾಡಲಿ !

ಚಂದ್ರಕವಿ ವಿರಚಿತ

# ಶಂಕರ ಶತಕ

ಶ್ರೀಪತಿ ಶಾರದಾಪತಿ ಶಚೀಪತಿಪೂಜಿತ ಪಾದಪಂಕಜಂ
ಕೋಪಕೃಶಾನುಕೀಲಶಲಭೀಕೃತ ಶಂಬರವೈರಿವಿಗ್ರಹಂ |
ತಾಪಸಚಕ್ರವರ್ತಿಜಯ ನಿಶ್ಚಲಚಿತ್ತಚಕೋರಚಂದ್ರನೆಂ
ದೀಪರಿ ನಿಮ್ಮನಾಂ [1]ನುತಿ[1]ಸುತುಂ ನೆನೆವೆಂ ಗುರುಮೂರ್ತಿಶಂಕರಾ || || ೧ ||

ಜಲನಿಧಿ ಸೀಮೆ ರಾಜ್ಯವಿಭವ[2]ಕ್ಕೆ[2] [3]ದಿಶಾಗಜವೆಂಟು ಸೀಮೆ[3] ಮಾ |
ರ್ಬಲಕಱುವತ್ತುನಾಲ್ಕು ಕಳೆ ಸೀಮೆಯಭಿಜ್ಞತೆಗಬ್ಜಜಾಂಡ ಮಂ |
ಡಲವೃತ ಸೀಮೆ ಕೀರ್ತಿಗೆನೆ ಸೋಮಕುಲ ಕ್ಷಿತಿಪಾಲರಲ್ಲಿವೆ
ಗ್ಗಳಿಸಿದನೇಳ್ಗೆ[4]ಯಿಂ ವಿಜಯರಾಯತನೂಭವ ದೇವಭೂವರಂ || † || ೨ ||

ಜನಪತಿ ಮಾತ್ರವೇ ಗುಣದೊಳೀಕ್ಷಿಸೆಯೈದನೆಯಂಬುರಾಶಿಯಾ
ಱನೆಯ ಸುಪರ್ವಭೂಮಿರುಹಮೇಳನೆಯಗ್ಗದ ಚಕ್ರವರ್ತಿಯೆಂ |
ಟನೆಯ ಕುಲಾದ್ರಿ ಯೊಂಬತನೆಯೊರ್ವ ದಿಶಾಪತಿ ಪೇಳಲೇನೊ ಪ
ತ್ತನೆಯ ವಿರಿಂಚಿಯೆಂಬುದು ಜಗಜ್ಜನವೀ ಗಜವೇಂಟಿಕಾಱನಂ || || ೩ ||

ತರುಗಳೊಳೆಂತು ಕಲ್ಪತರುವದ್ರಿಗಳೊಳ್ಕನಕಾದ್ರಿಯೆಂತು ದಿ
ಕ್ಕರಿಗಳೊಳೆಂತು ದೇವಕರಿ ಯಬ್ಧಿಗಳೊಳ್ಕಲಶಾಬ್ಧಿಯೆಂತು ಭೂ |
ಪರಿವೃತ ದೇವರಾಯನ ಮಹಾಸಚಿವೇಂದ್ರರೊಳೊಪ್ಪುತಿರ್ಪ[5]ನಂ
ತರಸಪಮಂತ್ರಿಸೂನು ಗುರುರಾಯ ಮಹಾಸಚಿವೇಂದ್ರ ಚಂದ್ರಮಂ || || ೪ ||

ಅನವರತಂ ಪರೋಪಕೃತಿಗೆಯ್ವುತೆ ತಾನಿರೆ ಹೆತ್ತ ತಂದೆಯಂ
ನೆನೆಯದು ಬೇಡಿದಾಗಳೊಸೆದೀವುತ ತಾನಿರೆ ಪೂಣ್ದ ವಿತ್ತಮಂ |
ನೆನೆಯದು ಸತ್ಕೃತಾದಿಯನೊಡರ್ಚುತೆ ತಾನಿರೆ ದುಷ್ಕೃತಾದಿಯಂ
ನೆನೆಯದು [6]ಚಿತ್ತ[6]ಮೇವೊಗಳ್ವೆನಾಂ ಗುರುರಾಯ ಮಹಾಪ್ರಧಾನನಂ || || ೫ ||

---

1. ಸ್ತುತಿ (ಚ) 2. ಕ (ಕ) 3. ದಿಟಂ ದಿಕೆಂಟು ರಾಜ್ಯಸೀಮೆ (ಕ); ದಿಶಂ ಗಜವೆಂಟು ಸೀಮೆ [ಗ] 4. ಯಂ [ಕ] † ೨ ರಿಂದ ೫ ರ ವರೆಗೆ ಒಟ್ಟು ೪ ವೃತ್ತಗಳು 'ಚ' ಪ್ರತಿಯಲ್ಲಿ ಮಾತ್ರ ಇಲ್ಲ. 5 ಸಿಂ [ಗ] 6 ಮತ್ತ (ಗ)

೬ ಕವಿಯು ವಾಚಾಳಿಯಾಗಿ ಇವನು ಇಂದ್ರ, ಚಂದ್ರ ಎಂದು ನರಸ್ತುತಿಯನ್ನು ಮಾಡುವುದು ಯೋಗ್ಯವಲ್ಲ. ಎಲೈ ಚಂದ್ರಶೇಖರ ಕವಿರಾಜನೆ, ಭಕ್ತಿ, ವಿರಕ್ತಿ, ಮುಕ್ತಿ–ಇವುಗಳಿಗೆ ಮೂಲಕಾರಣವಾಗುವಂತೆ ಈ ಶಂಕರಶತಕ ಪ್ರಬಂಧವನ್ನು ಹೇಳು ಎಂಬುದಾಗಿ ಉಪದೇಶವನ್ನಿತ್ತ ನನ್ನ ಗುರುಮೂರ್ತಿಯಾದ ಗುರುರಾಯನು ಮೆಚ್ಚುವಂತೆ ಅತ್ಯಾಶ್ಚರ್ಯವಾಗುವ ರೀತಿಯಲ್ಲಿ ಈ ಶತಕವನ್ನು ಈಡೇರಿಸುವೆನು.

೭ ಎಲೈ ಗುರುಮೂರ್ತಿ ಶಂಕರನೆ, ಈ ಶಂಕರಶತಕವು ಶಿವಭಕ್ತಿಸಂಪನ್ನರಿಗೆ, ಸಂಸಾರವು ಹೇಯವೆಂದು ಅರಿತ ವಿರಕ್ತರಿಗೆ, ಮೋಕ್ಷಮಾರ್ಗವನ್ನು ಕಾಣಬಲ್ಲವರಿಗೆ ಸೊಗಯಿಸುವುದಲ್ಲದೆ ದಾರಿವಟ್ಟಲಂತೆ ರಸವನ್ನು ಬಿಡುತ್ತ ಕಸವನ್ನು ಹಿಡಿದಿರುವ ದುರಾಸೆಯ ಜನರಿಗೆ, ದುರಹಂಕಾರಿಗಳಿಗೆ ಹಾಗೂ ದುರಾತ್ಮರಾದವರಿಗೆ ಸೊಗಯಿಸುವುದೇನು ?

೮ ನಿಮ್ಮನ್ನು ಹೆಸರುಳ್ಳವನಲ್ಲ, ಸಗುಣನಲ್ಲ, ಸಾಕಾರನಲ್ಲ, ಸಂಸಾರದೊಳಗಾದವನಲ್ಲ, ಸಮಸ್ತದೇವತಾ ಸಮೂಹದಲ್ಲಿ ಒಬ್ಬನಾದವನಲ್ಲ ಎಂಬುದಾಗಿ ತಿಳಿದಿದ್ದೂ ಸುಮ್ಮನಿರದೆ, ಇದೇಕೆ ಸ್ತುತಿಸಲು ಬಯಸಿದೆನು !

೯ ಶ್ರುತಿ, ಸ್ಮೃತಿ, ಪುರಾಣ. ಆಗಮ–ಇವುಗಳ ಸಮೂಹವು ಸದಾ ಮಾಡಿದ ಸ್ತೋತ್ರವಷ್ಟನ್ನೂ ಕನಿಷ್ಠಪಕ್ಷ ಹಾಗೆಯೇ ಕೇಳೋಣವೆಂದರೆ ಕಲ್ಪಸಹಸ್ರವೂ ಸಾಲದು. ಇನ್ನು ಬೇರೆಯ ಕವಿತ್ವ ಮೂಡಲು ಒಂದಿಷ್ಟಾದರೂ ಬಿಡುವು ಇದೆಯೆ? ನಿಮ್ಮನ್ನು ಹೊಗಳುವವನಲ್ಲ; ಇದೊಂದು ನೆಪದಿಂದ ನೆನೆಯುತ್ತೇನೆ.

೧೦ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮರೆಂದು ವರ್ಣಿಸುವ ನಿಮ್ಮ ಅಷ್ಟಮೂರ್ತಿಗಳ ಹಂಗಿಗೆ ಸಮಸ್ತಲೋಕದ ಸಕಲಸಂಪತ್ತೂ ಒಳಗಾದುದಲ್ಲವೆ? ಕೆರೆಯ ನೀರನ್ನು ಕುಡಿದು ತೊರೆಯನ್ನು ಹೊಗಳುವಂತೆ ಕೃತಘ್ನರು ಅನ್ಯದೈವಗಳ ಸ್ತುತಿಗೆ ಎಷ್ಟೋ ಹಂಬಲಸಿ ಕೆಡುವರಲ್ಲವೆ?

[1]ಸೊರಹುತಲಿಂದ್ರ ಚಂದ್ರ[1]ನಿವನೆಂಬ ನರಸ್ತುತಿಯಲ್ಲ ಚಂದ್ರಶೇ
ಖರ ಕವಿರಾಜ ! ಭಕ್ತಿಗೆ ವಿರಕ್ತಿಗೆ ಮುಕ್ತಿಗೆ ಬೀಜಮಾಗೆ ಶಂ |
ಕರ ಶತಕಪ್ರಬಂಧ[2]ಮನೆ ಪೇಳಿದನೆಂದು[2]ಪದೇಶವಿತ್ತ [3]ಮ
ದ್ಗುರು[3] ಗುರುರಾಯ[4]ನಿಚ್ಚೆವಡೆ[4] [5]ತೀರ್ಚುವೆ[5]ನಚ್ಚರಿ ಪೆರ್ಚುವಂದದಿಂ ॥ ॥ ೬ ॥

ಇದು ಶಿವಭಕ್ತಿಯುಳ್ಳವರ್ಗೆ ಸಂಸೃತಿ ಹೇಹಮೆನಿಪ್ಪವರ್ಗೆ ಮೋ
ಕ್ಷದ ಬಗೆಗಾಣ್ಬವರ್ಗೆ ಸೊಗಯಿಪ್ಪ[6]ದಿ[6]ದಲ್ಲದೆ [7]ದಾರ[7]ವಟ್ಟಲಂ |
ದದಿ ರಸಮಂ [8]ಬಿಡುತ್ತೆ[8] ಕಸ[9]ಮಂ[9]ಪಿಡಿದಿರ್ಪ ದುರಾಸೆಯರ್ಗೆ ದು
ರ್ಮದರ್ಗೆ* ದುರಾತ್ಮಕರ್ಗೆ ಸೊಗಯಿಪ್ಪುದೆ ಪೇಳ್ಗುರುಮೂರ್ತಿಶಂಕರಾ ॥ ॥ ೭ ॥

ಪೆಸರ್ವ*ಡೆದಾತನಲ್ತು ಪಿರಿದುಂ ಗುಣಮುಳ್ಳವನಲ್ತು ರೂಪು [10]ರೂ[10]
ಢಿಸಿದವನಲ್ತು ಲೋಕದೊಳಗಾದವನಲ್ತು ಸಮಸ್ತದೇವತಾ |
ಪ್ರಸರದೊಳೊರ್ವರಂದದವ[11]ನಲ್ತೆನುತುಂ ತಿಳಿ[11]ದಿರ್ದು ನಿಮ್ಮನಾಂ
ಸಸಿನಿರದಂತಿದೇಕೆ ಪೊಗಳಲ್ಬಗೆದೆಂ ಗುರುಮೂರ್ತಿಶಂಕರಾ ॥ ॥ ೮ ॥

ಶ್ರುತಿನಿಕರ ಸ್ಮೃತಿ[12]ವ್ರಜ[12] ಪುರಾಣಗಳಾಗಮವೃಂದವಾವಗಂ
ನುತಿಯಿ[13]ಸಿ[13]ದಂತುಟಂ ಕಡೆಗೆ ಕೇಳ್ವಡೆ ಕಲ್ಪಸಹಸ್ರ[14]ಮೈದವಿ[14] |
ನ್ನಿತರ ಕವಿ[15]ತ್ವವಂಕುರಿಸಲೊಂದಿನಿತುಂ[15]ತೆಱಪುಂಟೆ ನಿಮ್ಮನಾಂ
[16]ನುತಿ[16]ಸುವನಲ್ಲಿದೊಂದು ನೆವದಿಂ ನೆನೆವೆಂ ಗುರುಮೂರ್ತಿಶಂಕರಾ ॥ ॥ ೯ ॥

ಧರೆ ಜಲವಗ್ನಿ ವಾಯು ಗಗನಂ ಮಿಹಿರಂ ಶಶಿಯಾತ್ಮ[17]ರೆಂದು[17]ಬಿ
ತ್ತರಿ[18]ಸುವ[18] ನಿಮ್ಮ ಮೂರ್ತಿಗಳ ಹಂಗಿನದಲ್ತೆ ಸಮಸ್ತಲೋಕದೈ |
ಸಿರಿ [19]ಕೆಱೆ[19]ನೀರನುಂಡು [20]ತೊಱೆ[20]ಯಂ ಪೊಗಳ್ವಂತೆ† ಕೃತಘ್ನರನ್ಯದೇ
ವರ ನುತಿಗೆಂತುಟೋ[21] ಬಯಸಿ ಬೀಳ್ವರಲೈ[21]ಗುರುಮೂರ್ತಿಶಂಕರಾ ॥ ॥ ೧೦ ॥

---

1. ಸ್ವರಹುತೆ ಚಂದ್ರನಿಂದ್ರ(ಚ) 2. ವನೆ ಪೇಳ್ವುದೆಂದು (ಕ); ವನು ಪೇಳೆನಿಪೊಂದು(ಚ) 3. ಸದ್ಗುರು (ಗ) 4. ನಿಚ್ಚೆಬಡೆ [ಚ] 4+5. ನಿಚ್ಚೆಯೊಳೊಡರ್ಚುವೆ [ಕ] 5 ತೀರ್ಚಿದೆ [ಚ] 6. ದ [ಚ] 7. ದಾರ [ಕ ಚ] 8. ಬಿಡುತ್ತ [ಚ] 9. ನಂ [ಚ] 10. ಜೂ [ಚ] 11. ನಲ್ತೆನುತ್ತಬಿಃ [ಚ] 12. ವ್ರಾತ [ಚ] 13. ಸ [ಗ] 14. ವೆಯ್ದದಿ [ಚ] 15. ಸ್ತವಕ್ಕನಿತುವಂಕುರಿಸಲ್ [ಚ] 16. ಸ್ತುತಿ [ಚ] 17. ನೆಂದು [ಚ] 18. ಸಿದ [ಚ] 19. ತೊಱೆ (ಚ) 20 ಕೆಱೆ [ಚ] † ಕೊಲೀಃಸಿ : ಕೆಱೆಯನುಂಡು ತೊಱೆಯ ಹೊಗಳುವರು-"ಪ್ರಭುಗೀತೆ" : ೧೦೧೭; ಪ್ರಭುದೇವರ ವಚನ ಟೀಕು ೩೦೮. 21. ಬಸಿದುಬೀಳ್ವರೆಲೇ [ಚ]

೧೧ ಹೂವಿನ ಬಾಣಗಳು ಐದು ಹೌದು! ಕಬ್ಬಿನ ಜಲ್ಲೆಯೆ ಬಿಲ್ಲು ನಿಜ! ದುಂಬಿಗಳ ಹಿಂಡೆ ಬಿಲ್ಲಿನ ಹಗ್ಗ, ದಿಟ! ಏನಿದು ವಿಚಿತ್ರ! ಹದಿನಾಲ್ಕು ಲೋಕಗಳನ್ನು ಎಲ್ಲಿ ನೋಡಿದರೂ ಸುಟ್ಟು ಬೂದಿಮಾಡಿ, ಮತ್ತೆ ಮನಮೋಹಿಸಿ ಒಡಮೂಡಿಸುವ ಮನ್ಮಥನು ಆ ನಿನ್ನೊಂದು ಉರಿಗಣ್ಣಿಗೆ ಎದಿರಾಗಲಿಲ್ಲ! ಆದರೂ ಆತನ ಕುಸುಮಶರಗಳ ಬಾಧೆಯೋ, ಸಹಿಸಲಸದಳ!

೧೨ ಮೃಗ, ಪಶು, ಪಕ್ಷಿ, ಕೀಟವೇ ಮೊದಲಾದ ಬಹು ಜನ್ಮಗಳಲ್ಲಿ ತೊಳಲಾಡುತ್ತ ಹೇಗೋ ಮಾನವಜನ್ಮ ದೊರಕಿದರೆ ಅದು ಪುಣ್ಯದ ಹೆಚ್ಚಳ. ಮರಳಿ ಆ ನರಜನ್ಮದಲ್ಲಿ ನಿನ್ನಮೇಲಣ ಭಕ್ತಿ ನೇರವಾಗಿ ದೊರಕೊಂಡಿತೆಂದರೆ ಕಬ್ಬಿನಮೇಲೆ ಜೇನು ಮೂಡಿದಂತೆ! ಹೊನ್ನಿಗೆ ಕಂಪು ಒಡಗೂಡಿ ಬಂದಂತೆ!

೧೩ ದೇಹಪ್ರತಾಪದಿಂದ ಸುಡಿಸಿಕೊಳ್ಳದೆ, ಬಾಯರುಚಿಗೆ ಮೆಚ್ಚಿ ಮದ್ಯವನ್ನು ಕುಡಿಯದೆ, ವೇದವನ್ನು ಹಳಿದು ಪಾಪದಲ್ಲಿ ಮುಳುಗದೆ, ನೆಟ್ಟಗೆ ಸ್ವರ್ಗವನ್ನು ಪಡೆಯಲು ಮೋಕ್ಷವನ್ನುಂಟುಮಾಡುವ ಶಿವಾಗಮವಲ್ಲದೆ ಬೇರೊಂದಿಲ್ಲ. ಬಿಡಿಯಾದ ಕೈಯ ಕಂಕಣಕ್ಕೆ ಕನ್ನಡಿಬೇಕೆ?

೧೪ ಶರೀರದ ಶಕ್ತಿ ಕುಂದದ ಮೊದಲೆ, ತನ್ನ ಇಂದ್ರಿಯಸಮೂಹದ ಪ್ರಾಬಲ್ಯ ನುಚ್ಚುನೂರಾಗದ ಮೊದಲೆ, ಮುಪ್ಪು ತನ್ನನ್ನು ಮುರಿದದುಮುವ ಮೊದಲೆ, ಹಣೆಯಬರಹ ಅಳಿಸದ ಮೊದಲೆ ನಿಮ್ಮ ಪಾದವನ್ನು ಪೂಜಿಸಬೇಕು; ಬಹಳ ಬಾಯಾರಿಕೆಯಾದ ಬಳಿಕ ಬಾವಿಯನ್ನು ಅಗೆಯುತ್ತಾರೆಯೆ?

೧೫ ಜ್ಞಾನದಿಂದ ಮೋಕ್ಷವನ್ನು ಪಡೆಯಬೇಕು. ಹಾಗಲ್ಲದಿದ್ದರೆ ಎಲ್ಲ ಗುರುಮೂರ್ತಿ ಶಂಕರನೆ, ಏಕೈಕ ಭಕ್ತಿಭಾವದಿಂದ ಧ್ಯಾನಿಸಿ ನಿಮ್ಮನ್ನೇ ಆರಾಧಿಸಬೇಕು. ಅದಲ್ಲದಿದ್ದರೆ ತಾನು ಜಾತಿಧರ್ಮದಲ್ಲಿರಬೇಕು. ಹೀಗೆ ಇವುಗಳಲ್ಲಿ ಯಾವುದೂ ಇಲ್ಲದ ಮಾನವನ ಜನ್ಮವು ಕಡೆಗೆ ನಾಯಿಬಾಳಿಗೆ ಸರಿಸಮನಾದುದು.

ಅರಲ ಸರಳ್ಗಳ್ಗೈದು ಗಡ ![1]ಕಬ್ಬಿನ[1]ಬಿಲ್ಗಡ ! ತುಂಬಿ[2]ವಿಂಡಿನೊ
ಳ್ದಿರು[2]ಗಡ ! ಚಿತ್ರಮಿಂತಿದು ಚತುರ್ದಶಲೋಕಮನೆಲ್ಲಿ ನೋಳ್ಪಡಂ ।
ಕರಿಮುರಿಮಾಡಿ ಮೋಹಿಸಿ ಮರಳ್ಚುವ ಮಾರ[3]ನದೊಂದು ನಿನ್ನ[3] ಕ
ಣ್ಣುರಿಗಿದಿರಾದುದಿಲ್ಲ[4]ವಱಿದುತ್ಕಟ ಹೋ ![4]ಗುರುಮೂರ್ತಿಶಂಕರಾ ॥ ॥ ೧೧ ॥

ಮೃಗ ಪಶು ಪಕ್ಷಿ ಕೀಟ ಬಹುಯೋನಿಗಳೊಳ್ತೊಳಲುತ್ತ[5] ಮೆಲ್ಲಮೆ
ಲ[6]ಗೆ[6] ನರಜನ್ಮವಾ[7]ದಡದು[7] ಪುಣ್ಯದ ಪೆರ್ಚುಗೆ ಮತ್ತಮಲ್ಲಿ ನೆ ।
ಟ್ಟ[8]ಗೆ[8] ಭವದೀಯ ಭಕ್ತಿ ದೊರಕೊಂಡಡೆ[9]ಕಬ್ಬಿನ[9]ಮೇಲೆ ಜೇ[10]ನು ತಾ[10]
ನೊಗೆದುದು ಪೊನ್ಗೆ ಕಂಪಮರ್ದುದೆಂಬ ತೆಱಿಂ ಗುರುಮೂರ್ತಿಶಂಕರಾ ॥ ॥ ೧೨ ॥

ಒಡಲ [11]ಪ್ರೊ[11]ಡರ್ಪಿನಿಂ ಸುಡಿಸಿಕೊಳ್ಳ[12]ದೆ[12] ಬಾಯ್ಸವಿ ಮೆಚ್ಚಿ ಮದ್ಯಮಂ
ಕುಡಿಯದೆ ವೇದಮಂ ಪಳಿದು ಪಾಪದೊಳಾಳದೆ ಸೈತೆ ಸಗ್ಗಮಂ ।
ಪಡೆವಡೆ ಮೋಕ್ಷಮಂ ಪಡೆವ[13]ದೊಂದು ಶಿವಾಗಮವಲ್ಲದಿಲ್ಲ ಜೇ
ರ್ವಡಿಸಿದ ಕೈಯ ಕಂಕಣಕೆ ಕನ್ನಡಿಯೇ [14]ಗುರುಮೂರ್ತಿಶಂಕರಾ ॥ ॥ ೧೩ ॥

ಒಡಲ ಪೊಡರ್ಪು ತುಟ್ಟಿಸದ ಮುನ್ನ ನಿಜೇಂದ್ರಿಯ ವರ್ಗದೇಳ್ಗೆ[15]ಯೊ
ಗುರ್ಡಿಸದ[15]ಮುನ್ನ ಮುಪ್ಪು ಮುಱಿಯೊತ್ತದ ಮುನ್ನ ಲಲಾಟದಕ್ಕರಂ ।
ತೊಡೆಯದ ಮುನ್ನ ನಿಮ್ಮ[16]ಪದಮಂ[16]ನೆಱೆ ಪೂಜಿಸವೇಳ್ಕುಮೈದೆ [17]ನೀ
ರಡಸಿ ಬಳಿಕ್ಕ[17]ಬಾವಿಯನಗುಳ್ದಪರೇ ಗುರುಮೂರ್ತಿಶಂಕರಾ ॥ ॥ ೧೪ ॥

ಜ್ಞಾನದಿ ಮೋಕ್ಷಮಂ ಪಡೆಯವೇಳ್ಕುಮ[18]ದಲ್ಲದಡೊಂದೆ[18]ಭಕ್ತಿಯಿಂ
[19]ಧ್ಯಾನಿಸಿ ನಿಮ್ಮನೇ[19]ಭಜಿಸವೇಳ್ಕುಮದಲ್ಲ[20]ದೆ[20] ಜಾತಿಧರ್ಮದೊ ।
[21]ಳ್ತಾ[21]ನಿರವೇಳ್ಕುಮಿಂತಿವ[22]ಱಿಕೊಳಾ[22]ವುದುಮಿಲ್ಲದ ಮರ್ತ್ಯಜನ್ಮಮುಂ
ಶ್ವಾನನ ಜನ್ಮಮುಂ ಕಡೆಗೆ [23]ಸಕ್ಕಸಮಂ[23]ಗುರುಮೂರ್ತಿಶಂಕರಾ ॥ ॥ ೧೫ ॥

---

1. ಕರ್ವಿನ [ಚ] 2. ಯೋಳ್ । ಬಿಲ್ದಿರು [ಚ] 3. ನು ನಿಂದದೊಂದು [ಚ] 4. ವರೆದುತ್ತ ಕಟಾ [ಚ] 5. ತ್ರ [ಗ] 6. ನ [ಗ] 7. ದುದದು(ಗ)8. ನ [ಗ] 9. ಕರ್ವಿನ [ಚ] 10 'ಚ' ಪ್ರತಿಯಲ್ಲಿ ಈ ಭಾಗವಿಲ್ಲ. 11. ನ [ಚ] 12.— [ಚ] 13. ದೊಂದೆ [ಚ] 14. + ಪೇಳ್ [ಗ] 15. ಯೊಲ್ಗುಡಿಸದ [ಚ] 16. ಪಾದಮಂ [ಗ] 17. ನೀರಡಸಿದ ಬಳ್ಕೆ [ಗ] 18. ದಲ್ಲದೆ ಪೊಂದೆ [ಚ] 19. ನೀನೊಲಿವನ್ನೆಗಂ [ಚ] 20. ದೆ [ಚ] 21. ಳಾ [ಚ] 22. ದಱಿಕೊಳಾ [ಗ] 23. ಕಕ್ಕಸಮುಂ [ಗ]

೧೬ ಎಲೈ ಗುರುಮೂರ್ತಿಶಂಕರನೆ, ವೇದವೆ ನಿಮ್ಮ ಮಹಿಮೋನ್ನತಿಗೆ ಸಾಕ್ಷಿ. ನಾನದನ್ನು ಹೊಗಳುವುದರಿಂದೇನು? ನಿಮ್ಮ ಪಾದಕಮಲವನ್ನು ಎಡೆ ಬಿಡದೆ ಪೂಜಿಸಲು ಬಯಸದೆ ಹಳಿಯುತ್ತ, ಅನ್ಯದೇವತೆಗಳಿಗೆ ಮರ್ತ್ಯರು ತನು, ಮನ, ಧನಗಳನ್ನು ನೀಡಿದುದೆ ಆದರೆ ಅದೇನು ಬೂದಿಯ ಮೇಲೆ ಬಿದ್ದ ಹವಿಸ್ಸಾಗದೆ?

೧೭ ಮರದ ಬೇರಿಗೆ ನೀರೆರೆಯುವುದಲ್ಲದೆ ಕೊಂಬೆಯಮೇಲೆ ಕಟ್ಟೆಯನ್ನು ಕಟ್ಟಿ ಪ್ರತ್ಯೇಕವಾಗಿ ನೀರೆರೆಯುವುದೇಕೆ? ರೋಮಕೂಪದಲ್ಲಿ ಚರಾಚರಮಯವಾದ ವಿಶ್ವವನ್ನು ಧರಿಸಿದ ನಿಮ್ಮನ್ನು ಪೂಜಿಸುವವರಿಗೆ ಅನ್ಯದೇವತೆಗಳನ್ನು ಅರ್ಚಿಸುವ ಕೋಟಲೆಯೇಕೆ?

೧೮ ಇದು ಹಿತವಾದುದು ಎಂದು ಸದ್ಗುರು ಉದ್ದೇಶಿಸಿ ನಿರೂಪಿಸಿದರೆ, ಕೇಳಿಯೂ ಕೇಳದ ಕಿವುಡರಿಗೆ; ತಮ್ಮ ಮನವಾರೆ ವಿಚಾರಮಾಡಿ ಕಂಡೂ ಕಾಣದ ಕುರುಡರಿಗೆ; ವೇದಗಳು ಇಷ್ಟೊಂದು ಹೊಗಳುತ್ತಿರಲು ನಂಬಿ, ಹಾಗೆ ನಂಬಿಯೂ ನಂಬದ ಚಪಲರಿಗೆ ಭಕ್ತಿವಶವಾಗುವುದೆ?

೧೯ ಇನ್ನೊಬ್ಬರಿಗೆ ಕೊಡುವುದನ್ನು ಶಿವಾರ್ಪಣವೆನ್ನುತ್ತ ಕೊಡಲಾಗದೇಕೆ? ತನ್ನೊಡಲು ಹಿಡಿಯುವುದನ್ನು ಈಶ್ವರಾರ್ಪಣವೆನುತ್ತ ಉಣಲಾಗದೇ? ಸುಖ ಪಡುವುದನ್ನು ಈಶ್ವರಾರ್ಪಣವೆನುತ್ತ ಉಪಭೋಗಿಸಕೂಡದೆ? ಅಯ್ಯೊ, ಈ ಹಾಳು ದುರಾಸೆಯ ಮನಸ್ಸು ಅಜ್ಞಾನದಿಂದ ಬಡಂಬಡದು.

೨೦ ಸ್ವರ್ಗವೆಲ್ಲಿದೆ, ಅಮೃತವೆಲ್ಲಿದೆ, ಸುಂದರಿಯರು ಎಲ್ಲಿ, ದಿವ್ಯಸುಖವೆಲ್ಲಿ ಎನ್ನುವುದೇಕೆ? ಸದಾ ಶಿವನಲ್ಲಿ ಭಕ್ತಿಯುಳ್ಳವನಿಗೆ ಇಲ್ಲಿಯೆ ಸ್ವರ್ಗ, ಇಲ್ಲಿಯೆ ಅಮೃತ, ಇಲ್ಲಿಯೆ ಸುಂದರಾಂಗನೆಯರು, ಇಲ್ಲಿಯೆ ದಿವ್ಯಸುಖ ಎನ್ನಲು ಸಂಶಯ ವೇನು?

ವೇದವೆ ಸಾಕ್ಷಿ ನಿಮ್ಮ ಮಹಿಮೋನ್ನತಿಗಾನದನಾಡಲೇಂ ಭವ
ತ್ಪಾದಪಯೋಜಮಂ ಬಿಡದೆ ಪೂಜಿಸಲೊಲ್ಲದೆ ನಿಂದಿಸು[1]ತ್ತಿ[1] ಪಿ ।
ಕ್ಕಾದಮರರ್ಗೆ ಮರ್ತ್ಯರ್ಕೊಡಲಂ ಮನಮಂ ಧನಮಂ ಕೊಡಲ್ಕದೇಂ
ಬೂದಿಯ ಮೇಲೆ ಬಿಳ್ದ ಹವಿಯಾಗದೆ ಪೇಳ್ಗುರುಮೂರ್ತಿಶಂಕರಾ ॥ ॥ ೧೬ ॥

ಮರದ ಮೊದಲ್ಗೆ ನೀರೆಱೆವುದಲ್ಲದೆ ಶಾಖೆ[2]ಯ[2]ಮೇಲೆ ಕಟ್ಟೆಯಂ
ವಿರಚಿಸಿ ಬೇಱೆ ನೀರೆಱೆಯಲೇಕೆ ತನೂರುಹಕೂಪದೊಳ್ ಚರಾ ।
ಚರ[3]ಮಯ[3]ವಿಶ್ವಮಂ ತಳೆ[4]ದ[4] ನಿಮ್ಮನು ಪೂಜಿಸುವರ್ಗೆ ಮಿಕ್ಕ ನಿ
ರ್ಜರರನದೇಕೆ ಪೂಜಿಸುವ ಕೋಟಲೆ ಪೇಳ್ಗುರುಮೂರ್ತಿಶಂಕರಾ ॥ ॥ ೧೭ ॥

ಇದು ಹಿತವೆಂದು ಸದ್ಗುರು ಕುಱಿತ್ತು ನಿರೂಪಿಸೆ ಕೇಳ್ದುಕೇಳ್ದು ಕೇ
ಳದ ಕಿವುಡರ್ಗೆ ತಮ್ಮ ಮನವಾರೆ ವಿಚಾರಿಸಿ ಕಂಡು ಕಂಡು ಕಾ ।
ಣದ ಕುರುಡರ್ಗೆ ವೇದವಿನಿತುಂ ಪೊಗಳುತ್ತಿರೆ ನಂಬಿ ನಂಬಿ ನಂ
ಬದ ಚಪಳರ್ಗೆ ಭಕ್ತಿವಶಮುಪ್ಪುದೆ ಪೇಳ್ಗುರುಮೂರ್ತಿಶಂಕರಾ ॥ ॥ ೧೮ ॥

ಕೊಡುವುದನೀಶ್ವರಾರ್ಪಣ[5]ಮೆನುತ್ತಲ[5]ದೇಂ ಕೊಡಲಾಗದೇ[6]ಒಡ[6]
[7]ಲ್ಪಿಡಿ[7]ವುದನೀಶ್ವರಾರ್ಪಣ[8]ಮೆನುತ್ತಲ[8]ದೇಂ ಉಣಲಾಗದೇ[9]ಸುಖಂ ।
ಬಡುವುದನೀಶ್ವರಾರ್ಪಣಮೆನುತ್ತುಪಭೋಗಿ[10]ಸಿ ತೀ[10]ರದೇ [11]ಒಡಂ[11]
ಬಡದಿದು ಬೆಂದ ಬಾಕುಳಿ ಮನಂ ಮಱಿಹಿಂ ಗುರುಮೂರ್ತಿಶಂಕರಾ ॥ ॥ ೧೯ ॥

ಎಲ್ಲಿಯ ಸ್ವರ್ಗಮೆಲ್ಲಿಯ ಸುಧಾರಸಮೆಲ್ಲಿಯ[12]ನೀಱ[12]ವೆಣ್ಗಳಿ
ನ್ನೆಲ್ಲಿಯ ದಿವ್ಯಭೋಗವೆನಲೇಕೆ ಸದಾಶಿವಭಕ್ತಿಯುಳ್ಳವಂ ।
ಗಿಲ್ಲಿಯೆ ಸ್ವರ್ಗಮಿಲ್ಲಿಯೆ ಸುಧಾರಸಮಿಲ್ಲಿಯೆ [13]ನೀಱ[13]ವೆಣ್ಗಳಿಂ
ತಿಲ್ಲಿಯೆ ದಿವ್ಯಭೋಗಮೆನೆ ಸಂ[14]ದೆಗ[14]ಮೇಂ ಗುರುಮೂರ್ತಿಶಂಕರಾ ॥ ॥ ೨೦ ॥

---

1. ತ್ತ [ಚ] 2. ಗೆ [ಚ] 3. ದ ಸು [ಗ] 4. ದು [ಗ] 5. ವೆನುತಲ್ಲ [ಗ] 6. ಯಾವಗಂ ಉಣ [ಗ] 7. ಲ್ಪಡು [ಗ] 8. ವೆನುತಲ್ಲ [ಗ] 9. +ಸಂತತಂ [ಗ] 10. ಸುತಿ [ಚ] 11. ಮರ್ತ್ಯರಿಂಗೊಡಂ । [ಗ] 12.13. ನೀರ (ಗ) 14 ದೆಹ [ಚ]

೨೧ ಚಿತ್ತವನ್ನು ಶಾಂತಗೊಳಿಸಿ ಶಿವನ ಪಾದಕಮಲದಲ್ಲಿ ನೆಲೆಗೊಳಿಸಲು ಶಕ್ತನಲ್ಲದವನ ಶಿವಪೂಜಾಕ್ರಮವು ಅಸ್ತವ್ಯಸ್ತವಾದುದು. ಮನಸ್ಸಂಕಲ್ಪವು ಧನದ ಕಡೆಗೂ ವನಿತೆಯಕಡೆಗೂ ನಿಲ್ಲದೆ ಎಡೆಯಾಡುವುದು. ಎತ್ತು ಗಾಣವನ್ನು ಸುತ್ತುವ ಹಾಗೆ ಶರೀರವು ಶಿವಾಲಯವನ್ನು ಸುತ್ತುತ್ತಿದೆ.

೨೨ ಶಿವಭಕ್ತಿಯೊಂದು ಒಮ್ಮೆ ಚಿತ್ತದೊಡಗೂಡಿರಲು ಆತನೇ ಧನ್ಯ. ಆತನು ಮುಳುಗಿದುದೆ ಶಿವತೀರ್ಥ; ಇದ್ದ ಮನೆಯೇ ಶಿವಮಂದಿರ; ಏನು ನುಡಿದರೂ ಶಿವನ ಕೀರ್ತನೆಯೆ; ಆತನು ನೆನೆದುದೆ ಶಿವನ ರೂಪು; ಬಯಸಿ ಮಾಡಿದುದೆ ಶಿವನ ಪೂಜೆ. ತಿಳಿದರೆ ತಾನೆ ಶಿವನು.

೨೩ ಆಡುವ ಮಾತು ಕವಲು ನುಡಿಯಾಗದಿದ್ದಲ್ಲಿ, ಪಾಪ ಭೀತಿಯಿದ್ದಲ್ಲಿ, ಪರರ ವಸ್ತುವನ್ನು ಅಪಹರಿಸದಿದ್ದಲ್ಲಿ, ಸಹನೆಗೆ ಜುಗುಪ್ಸೆಪಡದಿದ್ದಲ್ಲಿ, ನಿಂದೆ ಬಾರದಿದ್ದಿತಾದರೆ, ಶಿವಪೂಜೆಯೊಂದಿದ್ದರೆ, ಮೋಕ್ಷದ ಬಯಕೆಯಿದ್ದರೆ, ಎಲೈ ಗುರುಮೂರ್ತಿಶಂಕರನೆ, ಮಾನವನು ಭೂಲೋಕದ ದೇವನೆನಿಸುವನು.

೨೪ ನೋಡುವವನೊಬ್ಬನಿದ್ದರೆ ಶಿವಾರ್ಚನೆಯನ್ನು ಅತಿಯಾಗಿ ಮಾಡಿ, ಕೊಂಡಾಡುವವನೊಬ್ಬನಿದ್ದರೆ ಶಿವಸ್ತುತಿಯನ್ನು ಬಹಳವಾಗಿ ಮಾಡಿ, ಕೊಂಡಾಡುವವರು ಯಾರೂ ಇಲ್ಲದಿದ್ದರೆ ಅವೊಂದನ್ನೂ ನಿಮಿಷಮಾತ್ರವೂ ಮಾಡದ ವೇಷಧಾರಿಯು ಶಿವಭಕ್ತನೆ?

೨೫ ಕೋಪಗೊಳ್ಳುವವನಾದರೂ ಅನ್ಯರಿಗೆ ಕೇಡನ್ನುಂಟುಮಾಡದೆ, ರಂಭೆಯಾದರೂ ಸ್ತ್ರೀಗೆ ಮೆಚ್ಚಿ ಸಿಕ್ಕದೆ, ದಾರಿದ್ರ್ಯವಾದರೂ ಬೇಡುವವನಿಗೆ ಏನೂ ಇಲ್ಲವೆಂದೆನ್ನದೆ, ಹಾನಿಯಾದರೂ ಅಸತ್ಯವನ್ನಾಡದೆ ಬಾಳುವ ಮಾನವನೇ ಯತೀಶ್ವರನು. ಆತನ ಆಚರಣೆಯೆ ಉಗ್ರವಾದ ತಪಸ್ಸು.

ಪದುಳಿಸಿ ಚಿತ್ತಮಂ ಶಿವಪದಾಂಬುಜದೊಳ್ ನಿಲಿಸಲ್ ಸಮರ್ಥನ
ಲ್ಲವನ ಶಿವಾರ್ಚ[1]ನ[1] ಕ್ರಮಮದೆತ್ತ[2]ಱ[2]ತತ್ತ[3]ಱ[3]ಮರ್ಥದತ್ತಲುಂ ।
ಸುದತಿಯರತ್ತಲುಂ ನೆನ[4]ವು[4] [5]ನಿಲ್ಲ[5]ದು ಗಾಣವನೆತ್ತು ಸುತ್ತುವಂ
ದದಿ ತನು ಸುತ್ತುತಿರ್ಪುದು ಶಿವಾಲಯಮಂ ಗುರುಮೂರ್ತಿಶಂಕರಾ ॥ ॥ ೨೧ ॥

ಹೃದಯದೊಳೊಂದಿ[6]ಯೊಮ್ಮೆ[6] ಶಿವಭಕ್ತಿಯ ಮೊಂದಿ[7]ರಲಾ[7] ಕೃತಾರ್ಥನಾ
ಳ್ದುದೆ ಶಿವತೀರ್ಥಮಿರ್ದ ಮನೆಯೇ ಶಿವಮಂದಿರಮೇನನೆಂದೊಡಂ ।
ತದು ಶಿವಕೀರ್ತನಂ ನೆನೆದುದೇ ಶಿವಮೂರ್ತಿ ನಿಜೇಚ್ಛೆಯಿಂ ನಿಮಿ
ರ್ಚಿದುವೆ ಶಿವಾರ್ಚನಂ ತಿಳಿಯೆ ತಾನೆ ಶಿವಂ ಗುರುಮೂರ್ತಿಶಂಕರಾ ॥ ॥ ೨೨ ॥

ನುಡಿಯೆರಡಾಗದಿರ್ದೊಡೆ ದಯಾಗುಣಮಿರ್ದೊಡೆ ಪಾಪಭೀತಿಯಿ
ರ್ದೊಡೆ ಪರವಸ್ತು[8]ವಿಂಗೆ[8]ಱಗದಿರ್ದೊಡೆ ಸ್ವೈರಣೆ[9]ಹೇಹ ಮಿಲ್ಲದಿ[9] ।
ರ್ದೊಡೆ ಪಳಿ ಪೊರ್ದದಿರ್ದೊಡೆ ಶಿವಾರ್ಚನಮಿರ್ದೊಡೆ ಮೋಕ್ಷದಿಚ್ಛೆಯಿ
ರ್ದೊಡೆ ಧರೆಯಲ್ಲಿ ದೇವನೆನಿಪಂ ಮನುಜಂ ಗುರುಮೂರ್ತಿಶಂಕರಾ ॥ ॥ ೨೩ ॥

ನೋಡುವನೋರ್ವನಿರ್ದೊಡೆ[10] ಶಿವಾರ್ಚನೆಯಂ ಮಿಗಿಲಾಗಿ ತೀರ್ಚಿ ಕೊಂ
ಡಾಡುವನೋರ್ವನಿರ್ದೊಡೆ [10]ಶಿವಸ್ತುತಿಯಂ ಪಿರಿದಾಗಿ ತೋಱ[11]ಕೊಂ[11] ।
ಡಾಡುವರಾರುಮಿಲ್ಲದೊಡೆ ತಾನ[12]ವನೊಂದನು[12] ನಿಮಿಷಮಾತ್ರ[13]ಮುಂ[13]
ಮಾಡದ ವೇಷಧಾರಿ ಶಿವಭಕ್ತನೆ ಪೇಳ್ಗುರುಮೂರ್ತಿಶಂಕರಾ ॥ ॥ ೨೪ ॥

ಮುನಿವವನಾದಡಂ [14]ಪೆಱಗೆ[14] ಕೇಡನೊಡರ್ಚದೆ [15]ರಂಭೆ[15]ಯಾದಡಂ
ವನಿತೆಗೆ ಮಚ್ಚಿ ಸಿಲ್ಕದೆ ದರಿದ್ರತೆಯಾದ[16]ಡಮರ್ಥಿ[16]ಗೇನುಮಿ ।
ಲ್ಲೆನಿಸದೆ ಹಾನಿಯಾದ[17]ಡಮಸತ್ಯಮನಾಡದೆ[17] ಬಾಳ್ವ ಮರ್ತ್ಯನೇ
ಮುನಿವರನಾತನಾಚರಣೆ[18]ಯುಗ್ರತಪಂ ಗುರುಮೂರ್ತಿಶಂಕರಾ ॥ ॥ ೨೫ ॥

---

1. ನಾ [ಚ] 2,3. ರ [ಗ] 4. ಹು [ಚ] 5. ನಿಲ್ಸು (ಗ) 6. ದೊಮ್ಮೆ [ಚ] 7. ದೊಡಾ (ಚ] 8. ಗೆದ್ದ [ಚ] 9. ಯಿದೊರ್ಡೆ ಹೇಹಮಿ [ಚ] 10. 'ಚ' ಪ್ರತಿಯಲ್ಲಿ ಇಷ್ಟು ಭಾಗವೂ ಕೈಬಿಟ್ಟುಹೋಗಿದೆ 11. ಱಾ [ಚ] 12. ದನೊಂದು (ಚ) 13. ದೊಳ್ (ಚ) 14. ಪೆರಗೆ (ಗ,ಚ) 15. ಜಂಭೆ (ಚ) 16. ಡನರ್ಥಿ (ಚ) ಡಂ ಅಥಿತಿ (ಗ) 17. ಡಂ ಅಸತ್ಯವನಾಡದೆ (ಗ) ಡಸತ್ಯಕೆಬೀಳದೆ (ಚ) 18. + ಯೆ (ಗ)

೨೬ ಒಮ್ಮೆ ಮನೆಯ ವಿಚಾರಕ್ಕೆ, ಒಮ್ಮೆ ಮನೆಗೆಲಸದ ಕೋಟಲೆಗೆ, ಒಮ್ಮೆ ಅಂಗನೆಯರ ಅನುರಾಗಕ್ಕೆ, ಒಮ್ಮೆ ಮನಕ್ಕೊಪ್ಪಿದ ಮೇಳಕ್ಕೆ, ಒಮ್ಮೆ ಮಕ್ಕಳಲ್ಲಿ ಅರಳಿದ ಮಮತೆಯೊಡನೆ ಪರಾಙ್ಮುಖರಾಗುವ ಮನುಜರಿಗೆ ಶಿವಭಕ್ತಿಯೆಂಬ ಸವಿ ತೋರುವುದೇ ?

೨೭ ಎಡಹುತ, ತಾಕಿ ಕುಕ್ಕರಿಸುತ, ಸೀನುತ, ಕೆಮ್ಮುತ, ಚಿಂತಿಸುತ, ತೂಕಡಿಸುತ, ನಿಟ್ಟುಸಿರು ಬಿಡುತ್ತ, ಆಕಳಿಸುತ್ತ, ಅಂಜುತ್ತ, ಆಣೆಯಿಡುತ್ತ, ಹರ್ಷಗೊಳ್ಳುತ್ತ, ಮಲಗುತ್ತ, ಎಚ್ಚರಗೊಳ್ಳುತ್ತ ಶಂಕರ, ಶಂಕರ, ಶಂಕರಾ ಎನಲು ನಾಲಗೆ ತಡಮಾಡದು. ಮತ್ತೇನನ್ನೂ ನಾನರಿಯೆನು.

೨೮ ಏನು ಮಾತನಾಡಿದರೂ ನಿನ್ನ ಹೆಸರೇ ಬರುವಂತೆ, ಏನು ಭಾವಿಸಿದರೂ ನಿನ್ನ ರೂಪೇ ತೋರುವಂತೆ, ಏನು ಸಿದ್ಧಪಡಿಸಿದರೂ ಅದು ನಿನ್ನ ಸೇವೆಗೆ ಸಲ್ಲುವಂತೆ, ಎಲೆ ಗುರುಮೂರ್ತಿ ಶಂಕರನೇ, ವರವನ್ನು ನಿರಂತರವಾಗಿ ದಯಪಾಲಿಸು.

೨೯ ನನ್ನ ಚಿತ್ತವನ್ನು ನಿಲಿಸಿಕೊಟ್ಟರೆ ಬ್ರಹ್ಮನ ಆಯುಸ್ಸನ್ನು ನೀನು ಕೊಟ್ಟವನು ; ಇಂದ್ರನ ಭೋಗವನ್ನೇ ಕೊಟ್ಟವನು ; ಮತ್ತೆ ಹದಿನಾಲ್ಕು ಲೋಕಗಳನ್ನೇ ನೀಡಿದವನು. ಹೆಚ್ಚು ಹೇಳುವುದರಿಂದೇನು ? ಯಾರಿಗೂ ದೊರಕದ ಮೋಕ್ಷಲಕ್ಷ್ಮಿಯನ್ನು ಕೊಟ್ಟವನು ನೀನು. ಇನ್ನೇನನ್ನೂ ಬಯಸಿ ನಾನು ನಿನ್ನನ್ನು ಬೇಸರಗೊಳಿಸೆನು.

೩೦ ಈ ಮನಸ್ಸು ನಿಮ್ಮನ್ನೇ ನೆನೆವೆನೆಂದರೆ ಮನ್ಮಥನು ಅಟ್ಟಿ ಸುಡುತ್ತಾನೆ. ಈ ತನು ನಿಮ್ಮ ಸೇವೆ ಮಾಡುತ್ತೇನೆಂದರೆ ಯಮನು ಚಕ್ಕನೆ ಕೊಂಡೊಯ್ಯುವನು. ಕಾಮವೈರಿಯೂ ಕಾಲಮದಹಾರಿಯೂ ಆದ ಗುರುಮೂರ್ತಿಶಂಕರನೆ. ನಿನಗಿದು ಉಚಿತವೆ ? ಹಗೆಗಳ ಆಟಾಟೋಪಕ್ಕೆ ಒಪ್ಪಿಸಿ ನೋಡುತ್ತ ಇರುವುದೆ ?

ಮನೆಯ ವಿಚಾರ[1]ಕೊಮ್ಮೆ[1] ಮನೆ[2]ವಾಳ್ತಿ[2]ಯ ದಂದುಗ[3]ಕೊಮ್ಮೆ[3] ಮಾನಿನೀ
ಜನದನುರಾಗ[4]ಕೊಮ್ಮೆ[4] ಮನದನ್ನ[5]ರ[5]ಮೇಳ[6]ಕದೊಮ್ಮೆ[6] ಮಕ್ಕಳೊಳ್ ।
ನನೆಕೊನೆಯೋಪ ಮೋಹದೊಡನೊಮ್ಮೆ ಮರಳ್ಚುವ ಮಾನಸರ್ಗೆ [7]ನೆ
ಟ್ಟನೆ[7] ಶಿವಭಕ್ತಿ[8]ಯೆಂಬ[8] ಸವಿಗಾಣಿ[9]ಪುದೇ[9] [10]ಗುರುಮೂರ್ತಿಶಂಕರಾ ॥ ॥ ೨೬ ॥

ಎಡಹುತ ತಾ[11]ಗಿ ಕುಕ್ಕುರಿಸಿ[11]ಸೀನುತೆ ಕೆಮ್ಮುತೆ ಚಿಂತಿಸುತ್ತೆ ತೂಂ
ಕಡಿಸುತೆ ಸುಯ್ಯುವಾಗಳಿಸುತಂಜುತ ಸೂರುಳಿಡುತ್ತ ಸಂತಸಂ ।
ಬಡುತ ಮಲಂಗುತೆಚ್ಚಱುತ ಶಂಕರ ಶಂಕರ ಶಂಕರಾಯೆ[12]ನ
ಲ್ತುಡೆಯದು[12] ಜಿಹ್ವೆ ಮತ್ತಱಿಯೆನೇನುವನಾಂ ಗುರುಮೂರ್ತಿಶಂಕರಾ ॥ ॥ ೨೭ ॥

ಆವುದನಾದೊಡಂ ನುಡಿಯೆ ನಿನ್ನಯ ನಾಮವೆ [13]ಬರ್ಪ[13] ಪಾಂಗಿನಿಂ
ದಾವುದನಾದೊಡಂ ಬಗೆಯೆ ನಿನ್ನಯ ಮೂರ್ತಿಯೆ ತೋರ್ಪ ಚಂದದಿಂ ।
ದಾವುದನಾಮೊಡಂ [14]ಸವೆಯೆ[14] [14]ನಿನ್ನಯ ಸೇವೆ[15]ಗೆ[15] ಸಲ್ವ ಮಾಳ್ಕೆಯಿಂ
[16]ದೇವ[16] ನಿರಂತರಂ ಕರುಣಿ[17]ಸೈ[17] ವರಮಂ ಗುರುಮೂರ್ತಿಶಂಕರಾ ॥ ॥ ೨೮ ॥

ನೆಟ್ಟನೆ ಚಿತ್ತಮಂ ನಿಲಿಸಿಕೊಟ್ಟಡೆ ನೀನೆಲೆ ಬೊಮ್ಮನಾಯುವಂ
ಕೊಟ್ಟವನಿಂದ್ರಭೋಗಮನೆ ಕೊಟ್ಟವ[18]ನಿಂ[18] ಪದಿನಾಲ್ಕು ಲೋಕಮಂ ।
ಕೊಟ್ಟವನಾ[19]ಡಲೇಂ ಪಲ[ವ]ನಾ[19]ರ್ಗೆಯುಮಾಗದ ಮೋಕ್ಷಲಕ್ಷ್ಮಿಯಂ
ಕೊಟ್ಟವನೇನುವಂ ಬಯಸಿ ಬೇಸಱಿಸೆಂ ಗುರುಮೂರ್ತಿಶಂಕರಾ ॥ ॥ ೨೯ ॥

ಮನವಿದು ನಿಮ್ಮನೇ ನೆನೆವೆನೆಂದೊಡೆ ಮನ್ಮಥನಟ್ಟೆ ಸುಟ್ಟಪಂ
ತನುವಿದು ನಿಮ್ಮನೋ[20]ಲಗಿ[20]ಪೆನೆಂದೊಡೆ [21]ಗಕ್ಕನೆ[21] ಕಾಲನೊಯ್ದಪಂ ।
ನಿನಗಿದು ತಕ್ಕುದೇ ಪಗೆಗಳುಬ್ಬಟೆ[22]ಗೊಪ್ಪಿಸಿ[22] ನೋಡುತಿರ್ಪರೇ
ಮನಸಿಜವೈರಿ ಕಾಲಮದಹಾರಿ[23]ಯೆಲ್ಲೈ[23] ಗುರುಮೂರ್ತಿಶಂಕರಾ ॥ ॥ ೩೦ ॥

---

1 ವೊಂಮ (ಚ) 2 ವಾರ್ತೆ (ಕ) ವಾರ್ತೆ(ಚ) 3 ವೊಂಮ್ಮೆ (ಚ) 5 ನ(ಗ) 6 ವದೊರ್ಮೆ (ಚ) 7 ಮೆಲ್ಲನೆ (ಚ) 8 ಯೊಂದ (ಚ) 9 ಸಲೇ (ಚ) 10 + ಪೇಳ್ (ಗ) 11 ಗುತಕ್ಕಱುತ (ಚ) f ತ (ಚ) s ತ್ರ [ಚ] 12 ಸುತ್ತಲೆಯಿಃದೆ (ಗ) ನಿಮ್ಮಯ (ಚ) 13 ಸಿರ್ಪ (ಗ) 14 ರಚಿಸೆ ಚ 15 ಯೆ ಗ 16 ದೇವಾ (ಗ) 17 ಸೀ (ಗ) 18 ನೀ ಗ 19 ಈ ಭಾಗ "ಗ" ಪ್ರತಿಯಲ್ಲಿ ಕೈಬಿಟ್ಟು ಹೋಗಿದೆ 20 ಲಯಿ (ಗ) 21 ಕಳ್ಕನೆ(ಚ) 22 ಯಂ ನಡೆ (ಚ) 23 ಯುಲ್ಲೈ (ಗ)

೩೧ ನಿಮ್ಮನ್ನೇ ನೋಡುವ, ನೋಡಿ ನೆನೆಯುವ, ನೆನೆದು ಹಿಗ್ಗುವ, ಹಿಗ್ಗಿ ಮೈನವಿರು ಮೂಡುವ, ಮೂಡಿ ನಡುಗುವ, ನಡುಗಿ ಉಬ್ಬುವ, ಉಬ್ಬಿ ಆನಂದದಿಂ ದೊಡಗೂಢುವ, ಹಾಗೆ ಕೂಡಿ ನಲಿಯುವ, ನಲಿದು ಹಾಡುವ, ಹಾಡಿ ಕೊಂಡಾಡುವ ಪುಣ್ಯವೊಂದನ್ನೇ ವರವಾಗಿ ಕರುಣಿಸು.

೩೨ ಶಿವ, ಶಿತಿಕಂಠ, ಶಂಭು, ಶಶಿಶೇಖರ, ಶೇಷವಿಭೂಷ, ಶೈಲಜಾಧವ, ಧವಳಾಂಗ, ಧೂರ್ಜಟಿ, ಧನಾಧಿಪಮಿತ್ರ, ಧನಂಜಯಾಕ್ಷ, ನಿರ್ಭವ, ಭವ, ಭರ್ಗ, ಭೀಮ, ಭುವನಾಶ್ರಯ, ಭೂತಗಣೇಶ, ಸದ್ಗುಣಾರ್ಣವ, ಗುಣಗೂಢನೆಂದೆನಿಸಿದ ಎಲೈ ಗುರುಮೂರ್ತಿಶಂಕರನೇ, ನೀನೆನಗೆ ಗಾಢಸೌಖ್ಯವನ್ನು ನೀಡು.

೩೩ ಗಿರಿಶ, ಗಿರೀಶ, ಈಶ್ವರ, ಮಹೇಶ್ವರ, ರುದ್ರ, ಕಪರ್ದಿ, ಭರ್ಗ, ಹರಿಣಾಜಿನಾಂಬರ, ದಿಗಂಬರ, ಶೂಲಿ, ಕಪಾಲಿ, ಕಾಲಸಂಹರ, ಹರ, ಕಾಲಕಂಧರ, ಮೇರುಧರಾಧರಧನ್ವಿ, ಪಿನಾಕಿ, ನಾಗಶೇಖರ, ನಿಟಿಲಾಕ್ಷ, ನಿತ್ಯಸ್ವರೂಪಿಯಾದ ಎಲೈ ಗುರುಮೂರ್ತಿಶಂಕರನೇ, ಸಂರಕ್ಷಿಸೈ.

೩೪ ಎಲೆ ದೇವ ಮಹೇಶ, ದೇವ ಮಹಿಮೋನ್ನತ, ದೇವ ಮಹೇಂದ್ರವಂದಿತ, ದೇವ ಪರಾತ್ಮ, ದೇವ ಪರಮೇಶ್ವರ, ದೇವ ಸುರಾಸುರಾರ್ಚಿತ, ದೇವ ಪುರಾರಿ, ದೇವ ಪುರುಷಾಹ್ವಯ, ದೇವ ಪುರಾತನಾಗ್ರಣಿ, ದೇವ ಪರೇಶ, ಶಕ್ತಿಶತನೇ ಪರಿರಕ್ಷಿಸೈ.

೩೫ ಪರಾತ್ಪರ, ಪಾರ್ವತೀಪತಿ, ಭಸ್ಮೀಕೃತ ಕಾಮಶರೀರ, ಕಮಲೋದ್ಭವ ಕಪಾಲಧರ, ಪನ್ನಗೇಂದ್ರಧರ, ಪಾಪಭಯಂಕರ, ಪಂಕಜಾರಿಶೇಖರ, ಪರಮಾತ್ಮ, ದೈತ್ಯಸಂಹರ, ಕುಂಜರಾಸುರವೈರಿ, ಕಾಮ ಸಂಹಾರಿ ಗುರುಮೂರ್ತಿಶಂಕರಾ ಕಾಪಾಡು.

ನೋಡುವ ನೋಡಿ ಜಾನಿಸುವ ಜಾನಿಸಿ ಹಿಗ್ಗುವ ಹಿಗ್ಗಿ ಮೈನವಿ
ರ್ಮೂಡುವ ಮೂಡಿ ಕಂಪಿಸುವ ಕಂಪಿಸಿ ಬೀಗುವ ಬೀಗಿ ಸಂತಸಂ ।
ಗೂಡುವ ಕೂಡಿ ನರ್ತಿಸುವ ನರ್ತಿಸಿ ಪಾಡುವ ಪಾಡಿ ಕೀರ್ತನಂ
ಮಾಡುವ ಸೈಪನೊಂದನೆ ವರಂಗೊಡು ನೀಂ ಗುರುಮೂರ್ತಿಶಂಕರಾ ॥ ॥ ೩೧ ॥

ಶಿವ ಶಿತಿಕಂಠ ಶಂಭು ಶಶಿಶೇಖರ ಶೇಷವಿಭೂಷ ಶೈಲಜಾ
ಧವ ಧವಳಾಂಗ ಧೂರ್ಜಟಿ ಧನಾಧಿಪಮಿತ್ರ ಧನಂಜಯಾಕ್ಷ ನಿ ।
ರ್ಭರ್ಗ[1]ನ[1] ಭವ ಭರ್ಗ ಭೀಮ ಭುವನಾಶ್ರಯ ಭೂತಗಣೇಶ ಸದ್ಗುಣಾ
ರ್ಣವ ಗುಣಗೂಢ [2]ಗಾಢ[2]ಗತಿಯಾಗೆಲೆ ನೀಂ ಗುರುಮೂರ್ತಿಶಂಕರಾ ॥ ॥ ೩೨ ॥

ಗಿರಿಶ ಗಿರೀಶ[3]ಯೀ[3]ಶ್ವರ ಮಹೇಶ್ವರ ರುದ್ರ ಕಪರ್ದಿ ಭರ್ಗ ಭಾ
ಸುರ ಹರಿಣಾಜಿನಾಂಬರ ದಿಗಂಬರ ಶೂಲಿ ಕಪಾಲಿ ಕಾಲಸಂ ॥
ಹರ [4]ಹರ[4] ಕಾಲಕಂಧರ ಧರಾಧರಧನ್ವಿ ಪಿನಾಕಿ ನಾ[5]ಗ[5]ಶೇ
ಖರ ನಿಟಲಾಕ್ಷ ನಿತ್ಯತರ ರಕ್ಷಿಸೆಲೇ ಗುರುಮೂರ್ತಿಶಂಕರಾ ॥ ॥ ೩೩ ॥

ದೇವ ಮಹೇಶ ದೇವ ಮಹಿಮೋನ್ನತ ದೇವ ಮಹೇಂದ್ರವಂದಿತಾ
ದೇವ ಪರಾತ್ಮ ದೇವ ಪರಮೇಶ್ವರ ದೇವ ಸುರಾಸುರಾರ್ಚಿತಾ ।
ದೇವ ಪುರಾರಿ ದೇವ ಪುರುಷಾ[6]ಹ್ವ[6]ಯ ದೇವ ಪುರಾತನಾಗ್ರಣೀ
ದೇವ [7]ಪರೇಶ[7] ಶಕ್ತಿ ಶತ ನೀಂ ಪೊರೆಯೈ ಗುರುಮೂರ್ತಿಶಂಕರಾ ॥ ॥ ೩೪ ॥

ಪರತರ ಪಾರ್ವತೀವರ ಪಟೀರಕಲೇವರ ಪದ್ಮಗರ್ಭಕ
ರ್ಪರಧರ ಪನ್ನಗೇಂದ್ರಧರ ಪಾಪಭಯಂಕರ ಪಂಕಜಾರಿಶೇ ।
ಖರ ಪರಮಾತ್ಮ ದೈತ್ಯಹರ ಪಾಟಿತಕುಂಜರಪಾದ[8]ನಿಮ್ನ[8]ನಿ
ರ್ಜರ [9]ಪರಿ[9]ಭೂತಪಂಚಶರಪಾಲಿಸೆಲೇ ಗುರುಮೂರ್ತಿಶಂಕರಾ ॥ ॥ ೩೫ ॥

---

1 ಯು (ಗ) 2 ಗಂಧ (ಚ) 3 ನೀ (ಚ) 4 ಕಲ (ಗ) 5 ಕಿ (ಚ) 6 ಸ್ವ (ಚ) 7 ಪರೀತ (ಚ)
8 ನಾಮ (ಗ) 9 ಪತಿ (ಚ)

೩೬ ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಲಯಕಾರಿಯಾದ ಕಡೆಗಣ್ಣನ್ನುಳ್ಳವನೇ, ರಕ್ಷಿಸು. ಹಿಮಗಿರಿತನಯಳಾದ ಪಾರ್ವತಿಯ ಕಣ್ಣುಗಳೆಂಬ ಕನ್ನೈದಿಲೆಗಳಿಗೆ ನಿಶಾಕರನಾದವನೇ, ಕಾಪಾಡು. ಜಟಾಜೂಟದ ಅಂಚಿನ ಹೊಸ ಮುತ್ತೆನಿಸಿದ ಗಂಗಾತರಂಗದ ತುಂತುರು ಹನಿಗಳನ್ನುಳ್ಳವನೇ, ಕಾಪಾಡು. ನಿನ್ನ ಪಾದಸೇವಕನಾದ ನನಗೆ ನೀನೇ ಶರಣು.

೩೭ ಅಯ್ಯೋ, ಬರಿದೆ ಅಲೆದಾಡಿ ಕುಕ್ಕುರಿಸುವ ಕಾಲು ಶಿವಾಲಯವನ್ನು ಸೇರದು. ನಿರರ್ಥಕವಾಗಿ ಉಬ್ಬಿ ನಿಂದಿಸುವ ನಾಲಗೆಗೆ ಶಿವನ ಸ್ತೋತ್ರ ಅಶಕ್ಯ. ವೃಥಾ ದುರಂತ ಚಿಂತೆಯಲ್ಲಿ ಮುಳುಗುವ ಮನಸ್ಸು ಶಿವಭಾವದ ಕಡೆಗೆ ಎದ್ದು ಮಣಿಯದು. ಇವುಗಳ ದುಷ್ಟತನ ಹೀಗೆ ವಿಚಿತ್ರತರವಾದುದು.

೩೮ ಕುರುಡ ಹೊಸೆದ ಹುಲ್ಲಿನ ಸರವಿಯನ್ನು ಕರು ಮೇಯಿತು ಎಂಬಂತೆ ನರನು ಒಮ್ಮೆ ಒಲಿದು ಮಾಡಿದ ನಿರ್ಮಳ ಧರ್ಮದ ಹಿರಿಮೆಯನ್ನು ಮಹಾಪಾಪವೊಂದು ಬಂದು ತಿಂದುಹಾಕಿದರೆ ಪುಣ್ಯ ಪಾಪಗಳ ಆಧಿಕ್ಯವು ಆ ಹುಲ್ಲಿನ ಹಗ್ಗವನ್ನು ಹೊಸೆವಂತೆ; ತಮ್ಮ ಸ್ಥಿತಿ ಆ ಸರವಿಯು ಮಧ್ಯೆ ಸಿಕ್ಕಿದ ಕೋಲಿನ ಅವಸ್ಥೆಯಂತೆ.

೩೯ ಈ ಹಾಳು ಮನಸ್ಸು ಕದ್ದು ತಿನ್ನುವ ದನದಂತೆ ಎಲ್ಲ ಕಡೆಗೂ ಹೋಗುತ್ತ ಒಂದೆಡೆ ನಿಲ್ಲದು. ಒಮ್ಮೆ ನಿಂತರೆ ಸಂಸಾರದ ಭಯವನ್ನು ಬಿಡದು; ಹಾಗೆ ಬಿಟ್ಟರೂ ಜ್ಞಾನಿಗಳ ಸಂಗಕ್ಕೆ ಒಪ್ಪದು. ಒಪ್ಪಿದರೂ ಚಾಪಲ್ಯವನ್ನು ಬಿಡದು; ಬಿಟ್ಟರೂ ಭಕ್ತಿಯಿಂದಿರುವೆನೆಂದು ಹೇಳದು; ಹೇಳಿದರೂ ನೆಲೆಗೊಂಡಿರದು. ಇದಕ್ಕಿನ್ನೇನು ದಾರಿ?

೪೦ ಧನಸಂಪತ್ತಿನಲ್ಲಿಯೂ, ವೇಶ್ಯಾವನಿತೆಯಲ್ಲಿಯೂ ಈ ಚಿತ್ತ ನೆಲಸದೆ ನಿಮ್ಮ ಪಾದದಲ್ಲಿ ನಿಂದು ನೆಲೆಗೊಂಡರೆ ಮತ್ತೆ ನನಗೆ ಪಾಪವುಂಟೆ? ಮನ್ಮಥನ ಅಳ್ತನ ನನ್ನ ಮೇಲುಂಟೆ? ಭಯಂಕರವಾದ ಸಂಸಾರಬಂಧನವು ನನಗಿನ್ನುಂಟೆ?

ತ್ರಾಹಿ ಸಮಸ್ತಲೋಕ ಜನನ ಸ್ಥಿತಿ ಸಂ[1]ಹೃತಿ[1]ಕಾರಿ[2]ಕೇಕರಾ[2]
ತ್ರಾಹಿ ತುಷಾರಶೈಲತನಯಾನಯನೋತ್ಪಲಯಾಮಿನೀಕರಾ ।
ತ್ರಾಹಿ ಜಟಾಂಚಲಾಭಿನವಮೌಕ್ತಿಕ[3]ಗಾಂಗ[3]ತರಂಗಸೀಕರಾ
ತ್ರಾಹಿ ನಿಜಾಂಘ್ರಿ ಕಿಂಕರ[4]ನು ನಾಂ ಶರಣಾಗೆಲೆ ನೀಂ[4] ಗುರುಮೂರ್ತಿ
ಶಂಕರಾ*॥ ॥ ೩೭ ॥

ಬಱಿದೆ ಪೊಳಲ್ದು ಕುಕ್ಕುರಿಪ ಕಾಲ್ ಶಿವಗೇಹಮ[5]ನೈದದಕ್ಕಟಾ[5]
ಬಱಿದೆ ಕಡಂಗಿ ಕಾಳ್ಗೆಡೆವ ಜಿಹ್ವೆ ಶಿವಸ್ತುತಿಗಾಱದಕ್ಕಟಾ ।
ಬಱಿದೆ ದುರಂತ ಚಿಂತೆಯೊಳಗಾಳ್ವ ಮನಂ ಶಿವಚಿಂತೆಯತ್ತಲೆ
ಡ್ದೆಱಗದು ಚಿತ್ರಮಿಂತಿ[6]ವ[6]ಱ ಗಾಳುತನಂ ಗುರುಮೂರ್ತಿಶಂಕರಾ ॥ † ॥ ೩೮ ॥

ಕುರುಡನೊಡರ್ಚೆ ಪುಲ್ಸರವಿಯಂ ಕಱು ಮೇ[7]ದುದೆನಿಪ್ಪ[7] ಪಾಂಗಿನಿಂ
ನರೆ[8]ನೊ[8]ಸೆದೊರ್ಮೆ ನಿರ್ಮಿ[9]ಸಿದ[9] ನಿರ್ಮಳ ಧರ್ಮದ ಪೆರ್ಮೆ[10]ಯಂ[10] ಮಹಾ ।
ದುರಿತಮದೊಂದು ಬಂದು ತವೆ ತಿಂದೊಡೆ ಪುಣ್ಯದ ಪಾಪದೆಳ್ತರಂ
ಸರಿ[11]ಬಲಿವಂತೆ[11] ತಮ್ಮಿರವು[12] ಸಿಕ್ಕಿದ[12] ಕೋಲ್ ಗುರುಮೂರ್ತಿಶಂಕರಾ॥ ॥೩೯॥

ತುಡುಗುಣಿಯಂತೆ ಬೆಂದ ಮನಮೆಲ್ಲೆಡೆ[13]ಗೆಯ್ದುತೆ[13] ನಿಲ್ಲದೊಮ್ಮೆ ನಿಂ
ದೊಡೆ ಭವದಿಂ ಭಯಂ[14]ಬಿಡದು[14] ಬಿಟ್ಟಡೆ ಬಲ್ಲರ ಗೋಷ್ಠಿಗೊಲ್ಲದೊ ।
ಲ್ದಡೆ ಚಪಲತ್ವಮಂ ಬಿಡದು ಬಿಟ್ಟಡೆ ಭಕ್ತಿಯೊಳಿ[15]ರ್ಪೆನೆನ್ನದೆಂ[15]
ದೊಡೆ ನೆಲೆಗೊಳ್ವದಿನ್ನಿದಕೆ ಪೇಳ್ಗತಿಯಂ ಗುರುಮೂರ್ತಿಶಂಕರಾ ॥ ॥ ೩೯ ॥

ವಿತ್ತದೊಳಂ ವಿಳಾಸಿನಿಯೊಳಂ [16]ನೆಲೆಗೊಳ್ವದೆ[16] ನಿಮ್ಮ ಪಾದದೊಳ್
ಚಿತ್ತ[17]ಮಿದೊಂದು[17] ನಿಂದು ನೆಲೆಗೊಂಡಡೆ ಮತ್ತೆನಗುಂಟೆ ದುಷ್ಕೃತಂ ।
ಮತ್ತೆನಗುಂಟೆ ಸಂದೆಡರು ಮತ್ತೆನಗುಂಟೆ ಮನೋಜನಾಳ್ತನಂ
ಮತ್ತೆನಗುಂಟೆ ಘೋರ ಭವಬಂಧನಮೆಲೇ ಗುರುಮೂರ್ತಿಶಂಕರಾ ॥ ॥ ೪೦ ॥

---

1 ಶ್ರುತಿ (ಗ) 2 ಕೇಶರ (ಚ) 3 ರಾಂಗ (ಚ) ಗಂಗಾ [ಗ] 4 ಶಿವಾಂಕರ ಮಾಂ (ಚ) * 'ಚ' ಪ್ರತಿಯಲ್ಲಿ ಈ ಪದ್ಯವಾದ ಮೇಲೆ 'ಭಕ್ತಿ ಸ್ಥಲ ಸಮಾಪ್ತಂ ಮಂಗಲಮಸ್ತು ಎಂದಿದೆ.' 5 ನೆಯ್ದಿದೇವನಾಂ (ಚ) 6 ದ (ಚ) † 'ಚ' ಪ್ರತಿಯಲ್ಲಿನ ಈ ಪದ್ಯದ ಮೊದಲ ಎರಡು ಸಾಲುಗಳ ಕ್ರಮ ವ್ಯತ್ಯಾಸವಾಗಿದೆ. 7 ದಪುದೆಂಬ (ಗ) 8 ರೆ (ಚ) 9 ಸುವ (ಚ) 10 ಯಿಂ (ಚ) 11 ಬರೆ ಮತ್ತ (ಚ) 12 ಕೀಲಿಸಿದ (ಚ) 13 ಗೈಯ್ಯುತೆ(ಗ) ಗೈದಿದ (ಚ) 14 ಬಡೆದು (ಚ) 15 ಪ್ಪೆಸಾನುಯುಂ (ಚ) ರ್ಪೆನೆಂ (ಗ) 16 ಮನ ನಿಲ್ಲದೆ (ಚ) 17 ಮಿದೊಂಮ (ಚ)

೪೧ ಆಡದ ಆಟವನ್ನು ಮೊವಲು ಆಡಿ ಆ ಬಳಿಕ ಏಕೆ ಪುಣ್ಯವನ್ನು ಗಳಿಸೆನು, ಸತ್ಯವನ್ನೇಕೆ ನುಡಿಯೆನು, ಪರೋಪಕಾರವನ್ನೇಕೆ ಮಾಡೆನು, ನಿಮ್ಮ ಪಾದಗಳನ್ನೇಕೆ ನೆಟ್ಟ ನೋಟದಿಂದ ನೋಡೆನು ? ಎನ್ನುತ್ತ ಈ ಅವಿವೇಕಿ ಮನಸ್ಸು ಮುಪ್ಪಿನಲ್ಲಿ ಹಿಂಸೆಪಡುತ್ತಲಿದೆ.

೪೨ ಮನೆ, ಮನೆವಾರ್ತೆ, ಹೆಂಡತಿ, ಮಕ್ಕಳು ಮೊದಲಾದುವನ್ನೆಲ್ಲ ಬಿಟ್ಟು ಕಾನನ ಪ್ರದೇಶದಲ್ಲಿ, ಎಲೆವನೆಯಲ್ಲಿ, ಕಂದಮೂಲ ಫಲಾದಿಗಳ ವ್ಯವಹಾರದಲ್ಲಿ, ಸಜ್ಜನರಾದ ಮುನಿಗಳ ಸಂಗದಲ್ಲಿ ತಪಸ್ಸನ್ನು ಮಾಡಲು ನಿಲ್ಲಿಸೋಣವೆಂದರೆ ಈ ಮನಸ್ಸು ನಿಲ್ಲದು. ಈ ಮನ ನಿಂತರೆ ನಾನೆ ಶಿವನಾಗುವುದಿಲ್ಲವೆ ?

೪೩ ಆಪತ್ತು ಕವಿದು ಬಂದ ಹೊತ್ತಿನಲ್ಲಿ, ಶತ್ರು ಮೇಲೆ ಬಿದ್ದ ವೇಳೆಯಲ್ಲಿ, ತನ್ನೊಡೆಯನು ಮುಖಕೊಟ್ಟು ಮಾತನಾಡದ ಸಮಯದಲ್ಲಿ, ಆತ್ಮ-ಸುತನನ್ನು ಯಮನು ಎಳೆದೊಯ್ದ ದಿನದಲ್ಲಿ, ದುರಂತ ಭೀತಿಯುಂಟಾದ ಕಾಲದಲ್ಲಿ ಆ ಕ್ಷಣವಲ್ಲೇ ವೈರಾಗ್ಯವನ್ನು ಹೊಂದುತ್ತ, ಮರುಕ್ಷಣವಲ್ಲಿ ಈ ಅವಿವೇಕಿಯಾದ ಮನಸ್ಸು ಮರುಳು ಗೊಳ್ಳುತ್ತಲಿದೆ.

೪೪ ಈ ಸಿರಿ ಗರಿಕೆಯ ಮೇಲಣ ಮುಂಜಾನೆಯ ಇಬ್ಬನಿ ; ಈ ಮಗ ಕಾಮನ ಬಿಲ್ಲು ; ಈ ಮಡದಿಯೇ ಮಿಂಚು, ನಿಶ್ಚಯ. ಈ ಶರೀರ ಮುಂಗಾರಿನ ಮುಗಿಲು. ಅಯ್ಯೋ ! ಈ ಹಾಳು ಬದುಕಿನಲ್ಲಿ ಯಾವುದು ನೆಲೆಯೆಂದು ನಂಬುವೆ. ಎಲೈ ಗುರುಮೂರ್ತಿಶಂಕರನೇ, ಮೋಸದಿಂದ ನನ್ನನ್ನು ಹೀಗೆ ಇವುಗಳಿಗೆ ಮರುಳಾಗುವಂತೆ ಮಾಡುವುದೇ ?

೪೫ ನೀನು ಒಳಗಿದ್ದರೆ ಈ ದೇಹದ ಗರ್ವ. ಹಾಗಲ್ಲವೆ ಬಿಸುಟುಹೋದರೆ ಮರುಕ್ಷಣದಲ್ಲಿ—ಛೀ, ಹೆಣ, ನೋಡಬೇಡ ; ಅಯ್ಯೋ ಮುಟ್ಟಬೇಡ ಎಂದರೆ, ನಾಯಿಕಾಗೆಗಳ ಬಾಯಿಗೆ, ಚಿತಾಗ್ನಿಯ ಬಾಯಿಗೆ ಬೀಳುವುದನ್ನು ನೆನೆದೆನೆಂದರೆ ಝಲ್ಲನೆ ಎದೆ ತಲ್ಲಣಿಸುತ್ತದೆ.

ಆಡದ[1]ಗೋಷ್ಠ[1]ಮಂ ಮೊದಲೊಳಾಡಿ[2]ಬಳಿಕ್ಕವದೇಕೆ[2] ಪುಣ್ಯಮಂ
[3]ಕೂಡೆ[3]ನವೇಕೆ ಸೂನೃತವನಾಡೆನದೇಕೆ ಪರೋಪಕಾರಮಂ ।
ಮಾಡೆನವೇಕೆ ನಿಮ್ಮಡಿಗಳಂ. ನಡೆ [4]ನೋಡೆನೆನುತ್ತ[4] ಮುಪ್ಪಿನೊ
[5]ಳ್ಪೀಡೆಗೊ[5]ಳುತ್ತಮಿರ್ಪುದವಿವೇಕಿ ಮನಂ ಗುರುಮೂರ್ತಿಶಂಕರಾ ॥ ೪೧ ॥

ಮನೆ [6]ಮನೆ[6]ವಾರ್ತೆ ಪೆಂಡತಿ ಸುತರ್ಮೊದಲಾ[7]ದುವನೆಲ್ಲವ[7]ಬಿಟ್ಟು ಕಾ
ನನದೆಡೆಯುಳ್ಳಿ [8]ಪರ್ಣ[8]ಕುಟಿಯುಳ್ಳಿ [9]ಫಲನ್ಯವ[9]ಹಾರದಲ್ಲಿ ಸ ।
ಜ್ಜನಮುನಿಸಂಗದಲ್ಲಿ ತಪಮಂ [10]ಪವೆಯುಲ್[10] ನಿಲಿಪ[11]ಕ್ಕೆ[11]ನಿಲ್ಲದೀ
ಮನವಿದು ನಿಂದೊಡಾನೆ ಶಿವನಾ[12]ಗನೆ[12]ಪೇಳ್ಗುರುಮೂರ್ತಿಶಂಕರಾ ॥ ॥ ೪೨ ॥

ಎಡರಡಸಿ[13]ರ್ದ ಪೊತ್ತು ಪಗೆಯೊತ್ತಿದ ವೇಳೆ ನಿಜೇಶ್ವರಂ ಮುಖಂ
[14]ಗೊಡದ[14]ಮುಹೂರ್ತವಾತ್ಮಭವನಂ ಜವನೊ[15]ಯ್ದ ದಿನಂ ಮಹಾಭಯಂ ।
ತೊಡಗಿದ ಕಾಲವಾಗಳೆ ವಿರಕ್ತಿಯೊಳೊಂ[16]ದುತಮಾಗಳಂತೆ ಕೈ
ಯ್ಯೊಡನೆ[16] ಮರುಳ್ಗೊಳುತ್ತಲಿದೆ ಮೂಢಮನಂ ಗುರುಮೂರ್ತಿಶಂಕರಾ ॥ † ॥ ೪೩ ॥

ಈ ಸಿರಿ ಪುಲ್ಲ ಮೇಲು[17]ದಿರ್ದ*[17]ಮುಂಬನಿಯೀ ಸುತನಿಂದ್ರಚಾಪಮಿಂ
ತೀ ಸತಿ ತಾನೆ ಮಿಂಚು ದಿಟ[18]ವೀ ಶರಿರಂ ನವ[18]ಕಾಲಮೇಘವ ।
ಯ್ಯೋ ಸುಡು ಬೆಂದ ಬಾಳ್ಕೆಯೊಳಗಾವುವನೈ ಸ್ಥಿರಮೆಂದು ನಚ್ಚುವೆಂ
ಮೋಸದೊಳೆನ್ನನಿಂತಿ[19]ವಕೆ[19] ಮಚ್ಚಿಪರೇ[20] ಗುರುಮೂರ್ತಿಶಂಕರಾ ॥ ॥ ೪೪ ॥

ನೀನೊ[21]ಳಗಿರ್ದ[22]ಡೀ[22]ಯೊಡಲ ಬಿಂಕ[23]ಮ[23]ದಲ್ಲದೆ ನೀಂ ಬಿಸುಟ್ಟಡೊಂ
ದೇ ನಿಮಿಷಕ್ಕೆ ನೋಡದಿರು ಚಿಃ ಪೆಣನಕ್ಕ[24]ಟ[24] ಮುಟ್ಟಬೇಡೆನಲ್ ।
ಶ್ವಾನನ ಬಾಯ್ಗೆ[25] ವಾಯಸದ ಬಾಯ್ಗೆ[25]ಚಿತಾಗ್ನಿಯ ಬಾಯ್ಗೆ ಬೀಳ್ವ[26]ದಂ[26]
[27]ನಾಂ[27] ನೆನೆಯಲ್ಕೆ ಝುಲ್ಲನೆದೆ[28]ತಲ್ಲಣಿ[29]ಕುಂ[29]ಗುರುಮೂರ್ತಿಶಂಕರಾ ॥ ॥ ೪೫ ॥

---

1 ನಾಟ್ಯ (ಕ.ಗ) 2 ಅವಕ್ಕೆ (ಗ) 3 ಮಾಡೆ (ಚ) 4 ನೋಡಿ (ಗ) 5 ಳ್ ವೇಡಿಕೊ (ಗ) 6 ಮನ (ಗ) 7 ದರಸೆಯ್ದೆ (ಚ) 8 ಪಲ್ಲ (ಚ) 9 ಸನ್ಯಪ (ಚ) 10 'ಚ' ಪ್ರತಿಯಲ್ಲಿ ಈ ಪದವಿಲ್ಲ 11 ಲ್ಕು (ಚ) 12 ಗನೆ (ಚ) 13 ರ್ಪ (ಚ) 14 ಗುಡದ (ಚ) 15 ಯ್ವ (ಗ) 16 ದಿ ತಮೋಗುಣಂ ಸಮಂತೊಡನೆ (ಗ) † 'ಚ' ಪ್ರತಿಯ ಈ ಪದ್ಯದ ಆರಂಭದಲ್ಲಿ 'ಶ್ರೀ ಶಿವಾಯನಮಃ ॥ ಅಥ ವೈರಾಗ್ಯಸ್ಥಲಂ' ಎಂದಿದೆ. 17 ದುಂದ (ಗ) 18 ಯೀ ಶರೀರವು (ಚ) 19 ದಕ್ಕೆ (ಗ) 20 + ಪೇಳ್ (ಗ) 21 + ಡಲೊ (ಗ) 22 ಡೇಂ (ಚ) 23 ಮಿ (ಚ) 24 ಟಾ (ಗ) 25 ಈ ಪದಗಳು 'ಗ' ಪ್ರತಿಯಲ್ಲಿ ಇಲ್ಲ. 26 ದಯ್ಯೋ (ಗ) 27 — (ಗ) 28 + ತಲ್ಲ (ಗ) 29 ಕ್ಕುಂ (ಗ)

೪೬ ಈ ಮಾನವ ಶರೀರವನ್ನು ಬಯಸಿ ಬದುಕಿದೆನೆ? ವ್ರತ ಮಾಡಿದೆನೆ? ಬೇಡಿಕೊಂಡೆನೆ? ಧ್ಯಾನಿಸಿ ಪಡೆದೆನೆ? ಜಪಿಸಿ ತಂದೆನೆ ಎಂದರೆ ಅದು ಮೊದಲೇ ಇಲ್ಲ. ನಾನದನ್ನು ಬಲ್ಲೆ. ನೀನೆ ಒಲಿದು ನೀಡುವೆ, ನೀನೆ ಸಲಹುವೆ, ನೀನೆ ಮುಳಿದು ಸೆಳೆದೊಯ್ಯುವೆ. ನನ್ನಲ್ಲಿ ನಾನೆ ಅಜ್ಞಾನದಿಂದ ಮಾಡಿಕೊಂಡ ಮಮಕಾರವಿದೇನು!

೪೭ ನಾನು ಯಾರ ಮಗ, ಯಾರ ಹೆಂಡತಿ, ಯಾರ ಸೋದರ, ಯಾರ ನೆಂಟನೆಂದು ವಿಚಾರಮಾಡಲು, ಮೊದಲು ಅವರೆಲ್ಲ ನನ್ನೊಡನೆ ಸಾವಿರಾರು ಜನ್ಮಗಳಲ್ಲಿ ಇದ್ದರೇನಾಯಿತು? ಯಮಾಲಯಕ್ಕೆ ಹೋಗಬೇಕಾದಲ್ಲಿ ನನ್ನೊಡನೆ ಅವರಿನ್ನು ಬರುತ್ತಾರೆಯೆ? ಮಾಯೆಯ ಪ್ರಣಯಮತ್ತತೆ ಸಂಸಾರಿಗೆ ಸತ್ತರೂ ಬಿಡದು. ಎಲೈ ಗುರುಮೂರ್ತಿಶಂಕರನೇ, ನೀನೆ ತಿಳಿಸಿ ಎಚ್ಚರಗೊಳಿಸು.

೪೮ ಹುಟ್ಟಿದ ಮೇಲೆ ಸಾಯುವುದು ಮನುಷ್ಯನಿಗೆ ಸಹಜ. ಆದರೆ ಅದು ಈ ದಿವಸ ತಪ್ಪಿದರೆ, ನಾಳೆ ತಪ್ಪಿದರೆ, ನಾಡಿದ್ದು ತಪ್ಪಿದರೆ ಬಂದಷ್ಟೆ ಲಾಭವೆಂಬುದು ಹುಸಿಯಲ್ಲ. ಈ ಬಾಳು ಒರಗಿಹೋಗುವುದು ಕನ್ನಡಿಯ ಮೇಲಣ ಉದ್ದು ಉರುಳು ಮಂತಲ್ಲವೆ! ರಕ್ಷಿಸುವುದಾದರೆ ನಿನಗಿದೇ ಸಮಯ.

೪೯ ಸತಿಪತಿಗಳ ವೀರ್ಯವೆಂಬುದು ಒಂದು ಮಹೇಂದ್ರಜಾಲ; ಆಗಲೆ ಗಟ್ಟಿಗೊಳ್ಳುವುದು, ಆಗಲೆ ಹೊಮ್ಮುವುದು, ಆಗಲೆ ರೂಪುದೋರುವುದು, ಆಗಲೆ ಅದಕ್ಕೆ ಹಸುಳೆತನ, ಹರೆಯ, ಮುಪ್ಪು ಬಂದೊದಗುವುದು. ಆಗಲೇ ಅದು ಬರಿ ಬೂದಿಯಾಗುವುದು. ಆ ಕಾರಣ ಎಲೈ ಗುರುಮೂರ್ತಿಶಂಕರನೇ, ನೀನು ಈ ಬಲೆಯಿಂದ ನನ್ನನ್ನು ಬಿಡಿಸು.

೫೦ ಎಡಹಿದರೆ—ಅಲ್ಲಿ, ನೀರು ಕುಡಿದರೆ—ಅಲ್ಲಿ, ಮಲಗಿದರೆ—ಅಲ್ಲಿ, ಬಿಕ್ಕಳಿಕೆ ಬಂದರೆ—ಅಲ್ಲಿ, ಮೈ ಮುರಿದರೆ—ಅಲ್ಲಿ, ಮಲವಿಸರ್ಜನೆ ಮಾಡುತ್ತಿದ್ದರೆ—ಅಲ್ಲಿ, ಕಾಲ್ತೊಡರಿದರೆ—ಅಲ್ಲಿ ತಮ್ಮ ಪ್ರಾಣವು ಬಿಟ್ಟುಹೋದರೆ ಹಾವನೆ ಹಾರಿ ಹೋಗುವವರಲ್ಲವೆ ಮಾನವರು! ನೂರುವರ್ಷ ಬದುಕುವವರು!

ಈ ನರದೇಹಮಂ ಬಯಸಿ[1]ಬಾಳ್ತೆನೆ[1] [2]ನೋಂತೆನೆ[2] ಬೇಡಿಕೊಂಡೆನೇ
[3]ಜಾನಿಸಿ[3]ಪೆತ್ತೆನೇ ಜಪಿಸಿ ತಂದೆನೆ ಮುನ್ನವದಿಲ್ಲ ಬಲ್ಲೆನಾಂ ।
ನೀನೊಸೆದೀವೆ ನೀಂ ಪಡೆದು ಪಾಲಿಪೆ ನೀಂ ಮುಳಿದೊಯ್ವೆಯೆನ್ನೊಳ-
ಜ್ಞಾನವಿ ಮಾಡಿಕೊಂಡ ಮಮಕಾರವಿದೇಂ ಗುರುಮೂರ್ತಿಶಂಕರಾ ॥ ॥ ೪೬ ॥

ಆರ ತನೂಜನಾರ ಸತಿಯಾರ ಸಹೋದರನಾರ ಬಂಧುವೆಂ
ದಾರಯೆ ಮುನ್ನವೆನ್ನೊಡನೆ ಜನ್ಮಸಹಸ್ರದೊಳ್[4]ದೊರ್ಡೇನ್[4] ಯಮಾ ।
ಗಾರಕೆ ಪೋಪ[5]ಡಿ[5]ನ್ನೊಡನೆ ಬರ್ಪರೆ ಮಾಯೆಯ ಮುಚ್ಚುಮದ್ದು ಸಂ-
ಸಾರಿಗೆ ಸತ್ತುಡಂ ಬಿಡದು ನೀಂ ತಿಳುಪ್ಪೈ ಗುರುಮೂರ್ತಿಶಂಕರಾ ॥ ॥ ೪೭ ॥

ಉದಯಿಸಿದಂದು ಸಾವುದು ಶರೀರಿಗೆ [6]ಸಾಜಮದಾದಡಿಂದು[6]ತ
ಪ್ಪಿದಡದು ನಾಳೆ ತಪ್ಪಿ[7]ದೊಡೆ[7] ನಾಡಿದು ತಪ್ಪಿದೊಡೆಯ್ದೆ ಲಾಭಮೆಂ ।
ಬುದು ಪುಸಿಯ[8]ಲ್ತು[8]ಕನ್ನಡಿಯ ಮೇ[9]ಲಣಿನುದ್ದುರುಳ್ವ*ಂತುಟಲ್ಲಯಿ[9]
ಬದುಕಿನ[10]ಸಾತ್ಮ[10]ಸಾಲಿಪೊಡಿನೇ ಸಮಯಂ ಗುರುಮೂರ್ತಿಶಂಕರಾ ॥ ॥ ೪೮ ॥

ತಿಳಿಯೆ ಮಹೇಂದ್ರಜಾಲವಿದು ಪೆಂಡಿರ ಗಂಡರ ವೀರ್ಯವೆಂಬುದಾ
ಗಳೆ ಬಲಿದಪ್ಪುದಾಗಳೆ[11]ಪೊದಳ್ದಪುದಾಗಳೆ[11]ರೂಪುದೋರ್ಪುದಾ ।
ಗಳೆ[12]ಪೊಱಪಾಯ್ವುದಾಗಳೆ[12] ಶಿಶುತ್ವ ಯುವತ್ವ ಜರತ್ವಮಪ್ಪುದಾ
ಗಳೆ ಬಱಿ ಬೂದಿಯಪ್ಪು[13]ದಿದ ನೀಂ ಬಿಡಿಸೈ[13] ಗುರುಮೂರ್ತಿಶಂಕರಾ ॥ ॥ ೪೯ ॥

ಎಡಹಿದಡಲ್ಲಿ ನೀರ್ಗುಡಿದಡಲ್ಲಿ ಮಲಂ[14]ಗಿದಡಲ್ಲಿ[14]ಬಿಕ್ಕು ಬಂ
ದಡಸಿದಡಲ್ಲಿ ಮೈಮುರಿದಡಲ್ಲಿ ಮಲಂ[15]ಬಿಡುತಿರ್ದ[15]ಡಲ್ಲಿ ಕಾ ।
ಲ್ದೊಡಕಿದಡಲ್ಲಿ ತಮ್ಮ ಹರಣಂ ಬಿಡೆ ಪಾವನೆ ಪೋಪ ಮಾನವ
ರ್ಗಡ ಶತವರ್ಷಮಂ ಬದುಕುವರ್ಗ[16]ಡ ಪೇಳ್[16] ಗುರುಮೂರ್ತಿಶಂಕರಾ ॥ ॥ ೫೦ ॥

---

1 ಬಾತೆನೆ (ಚ) 2 — (ಚ) 3 ಧ್ಯಾನಿಸಿ (ಚ) 4 ರ್ದರೆ (ಚ) 5 ರೆ (ಗ) 6 ಸಹಜವ ದೊಂಮ ಗಿಂದು (ಚ) 7 ದಡದು (ಗ) 8 ಲ್ಲ (ಚ) 9 ಗಣಿನುದ್ದುರುಳಿದಂತುಟೇ (ಚ) 10 ಬಾಳ್ಕೆ (ಕ); ಮಹಿಮೆ (ಚ) 11 ಪೊಱಪಾಯ್ವುದಾಗಳೆ (ಚ) ಪೊರಪೊಯ್ವುದಾಗಲೆ (ಗ) 12 — (ಚ) 13 ದೆಲೆ ಗೂಢಮಿದೇಂ () 14 ಬಿಡುವಲ್ಲಿ (ಚ) 15 ಗಿರುತಿರ್ದೊ (ಚ) 16 ಡಾ (ಗ)

೫೧ ಸದ್ವಂಶಜಳಾದ ಸತಿಯಲ್ಲಿ ಜುಗುಪ್ಸೆ; ದಾಸಿಯ, ವೇಶ್ಯೆಯ, ಜಾರಯ ಕಡೆಗೇ ಕಟ್ಟಕ್ಕರ; ವೇದತ್ರಯವಿಹಿತವಾದ ಕರ್ಮದಲ್ಲಿ ಆಲಸ್ಯ; ಪಾಪ ಕರ್ಮದಲ್ಲಿ ಮುನ್ನುಗ್ಗುವ ಆಸೆ; ಸತ್ಯದಲ್ಲಿ ಉಪೇಕ್ಷೆ; ಅಸತ್ಯದಲ್ಲಿ ಅಪೇಕ್ಷೆ. ತ್ಯಾಜ್ಯವಾದ ಈ ಕೀಳು ಮನಸ್ಸು ನನಗೆ ಈ ಜನ್ಮಗತಿಯನ್ನು ಅಂದೇ ತಂದೊಡ್ಡಿತು.

೫೨ ಮೊದಲು ನನಗೆ ನನ್ನನ್ನು ರಕ್ಷಿಸಿಕೊಳ್ಳುವ ಅಭಿಲಾಷೆ. ಬಳಿಕ ಸಂಸಾರವನ್ನು ಪ್ರಯತ್ನದಿಂದ ಸಲಹುವ ಆಸೆ. ಆಮೇಲೆ ಇತರರನ್ನು ರಕ್ಷಿಸುವ ಬಯಕೆ. ಮತ್ತೆ ನಾಡ ಜನರನ್ನೆಲ್ಲ ಕಾಪಾಡುವ ಹಂಬಲ ತುಂಬಿದೆ. ವಿಚಾರ ಮಾಡಿ ನೋಡಲು ಅತಿಯಾಸೆಯೆಂಬುದು ನರರನ್ನು ಕೆಡುವತನಕ ಕುಣಿಸದೆ?

೫೩ ಕುಲಜನೆಂದರೆ ಉಬ್ಬಿ, ಕಲಿಯೆಂದರೆ ಹಿಗ್ಗಿ, ಸುಂದರನೆಂದರೆ ಆಗಲೆ ಬಿಗುಮಾನ ಹೊಂದಿ, ಯುವಕನೆಂದರೆ ಬೀಗಿ, ಧನ ಸಂಪನ್ನನೆಂದರೆ ಹೆಚ್ಚಿ, ತಪಸ್ವಿ ಎಂದರೆ, ದೃಢವ್ರತನೆಂದರೆ ಉಕ್ಕಿ, ನಿರ್ಮಲ ಗುಣಿಯೆಂದರೆ ಮದಿಸಿ ಮಾನವನು ಕೆಟ್ಟನಲ್ಲವೆ?

೫೪ ತಮ್ಮ ಸಮಸ್ತ ಸೈನ್ಯವೂ ಎಡ ಬಲಗಳಲ್ಲಿಯೂ, ಮುಂದೆಯೂ ಹಿಂದೆಯೂ ಗುಂಪುಗೂಡಿ ಬರುತ್ತಿರಲು ತಮ್ಮ ಬಿರುದುಗಳಿಂದ ಕೊಂಡಾಡಿಸಿ ಕೊಳ್ಳುತ್ತ ಪಲ್ಲಕ್ಕಿಯಲ್ಲಿ ಬರತಕ್ಕವರು ಆಗಲೇ ಸೈನ್ಯವಿಲ್ಲದೆ, ಕೊಂಡಾಡುವವರಿಲ್ಲದೆ, ಪಲ್ಲಕ್ಕಿಯ ಕೋಟಲೆಯಿಲ್ಲದೆ ಹೋಗುವರು! ಅಯ್ಯೋ! ಅಂತಹ ಬಾಳಿಗೆ ಬೆಂಕಿ ಬೀಳಲಿ. ಪ್ರಾಣ ಹೋಯಿತೆಂದರೆ ಏನವಸ್ಥೆ!

೫೫ ಎಡೆಬಿಡದಂತೆ ಗುರಾಣಿ, ಕಠಾರಿ, ಕತ್ತಿಯ ಮೊತ್ತವೆ ಎತ್ತನೋಡಿದರೂ. ನಟ್ಟ ನೋಟದಿಂದ ನೋಡಿದ್ದೇ ಆದರೆ ಗುಂಪೊಡೆಯದೆ ಎವೆ ಸೀದು ಹೋಗುವಂತೆ ಥಳಥಳಿಸುವವರ ಸಾಲುಗಳಿವೆ. ಆಯುಧಗಳ ಹೊಡೆತದಿಂದ ತಮ್ಮ ದೇಹ ನೆಲಕ್ಕೊರಗಿ ಬಿನ್ದು ನೇ ಅವರ, ಬೆನ್ನ ಧೂಳಿಯನ್ನು ಒರಸುವವರೂ ಒಬ್ಬರಿಲ್ಲ. ಇದು ಬಹು ವಿಚಿತ್ರ!

ಕುಲಸತಿಯಲ್ಲಿ ಕೊಕ್ಕರಿಕೆ ದಾಸಿಯ ವೇಶಿಯ ಜಾರೆಯತ್ತಲೇ
ಬಲಿವೆಱ[1]ಕಂ ತ್ರ[ಯೀ][1]ವಿಹಿತ ಕರ್ಮ[2]ದೊಳಾಸಱು[2] ಪಾಪಕರ್ಮದೊಳ್ ।
ಸಲೆ ಪರಿವಳ್ತಿ ಸತ್ಯದೊ[3]ಳನಾಸ್ಥೆ[3]ಯಸತ್ಯದೊಳಿಚ್ಛೆ ಛೀಃ [4]ಸುಡೀ[4]
ಹೊಲೆಮನ[5]ವಂದೆ ತಂದುದೆ[5]ನಗೀ ಭವಮಂ ಗುರುಮೂರ್ತಿಶಂಕರಾ ॥ ॥ ೫೧ ॥

ಮೊದಲೆನಗೆನ್ನ ನೋವು[6]ದಭಿಲಾಷೆ[6] ಬಳಿಕ್ಕ ಕುಟುಂಬಮಂ ಪ್ರಯ
ತ್ನದೆ ಪೊರೆವಾ[7]ಸೆ[7] ಮೇಲೆ ಪರರಂ ಪರಿರಕ್ಷಿಸು[8]ವಳ್ತಿ[8] ಮತ್ತೆ ದೇ ।
ಶದ ಜನ[9]ರೆಲ್ಲರಂ[9] ಸಲ[10]ಪುವಿಚ್ಛೆ[10] ಪೊದಳ್ದ[11]ದೆ[11] ನೋಡೆ ತೃಷ್ಣೆಯೆಂ
ಬುದು ಕೆಡುವನ್ನೆಗಂ[12] ಕುಣಿಸದೇ[12] ನರರಂ ಗುರುಮೂರ್ತಿಶಂಕರಾ ॥ ॥ ೫೨ ॥

ಕುಲಯುತನೆಂದಡು[13]ಬ್ಬಿ[13] ಕಲಿಯೆಂದಡೆ ಹಿಗ್ಗಿ [14]ಸು[14]ರೂಪನೆಂದಡಾ
ಗಳೆ ಬಿಗುಹೇಱಿ ಜವ್ವನಿಗನೆಂದಡೆ ಬೀಗಿ ಧನಾಢ್ಯನೆಂದಡ ।
ಗ್ಗಳಿಸಿ ತಪಸ್ವಿಯೆಂದಡೆ ಕಡಂಗಿ [15]ಬಲುವ್ರತ[15]ನೆಂದಡು[16]ಕ್ಕಿ ನಿ
ರ್ಮಳ ಗುಣಿಯೆಂದಡು[16]ಬ್ಬರಿಸಿ ಕೆಟ್ಟಿನೆಲೈ[16] ಗುರುಮೂರ್ತಿಶಂಕರಾ ॥ † ॥ ೫೩ ॥

ಎಡಬಲ ಮುಂ[17]ದೆ[17] ಪಿಂ[18]ದೆ[18] ಪುದಿದೆಯ್ತರೆ ತಮ್ಮ ಸಮಸ್ತ ಸೈನ್ಯವು
ಗ್ಗಡಿಸಿಕೊಳು[19]ತ್ತಲಂದಣದಿ[19] ಬರ್ಪವರಾಗಳೆ ಸೈನ್ಯಮಿಲ್ಲವು ।
ಗ್ಗಡಿಸುವರಿಲ್ಲವಂದಣ[20]ದ[20] ದಂದುಗಮಿಲ್ಲದೆ ಪೋಪರಕ್ಕಟಾ
ಸುಡು [21]ಬಳಿಕಾ[21]ಬರ್ದು*ಂಕೆ[22]ನಸು[22]ಹಿಂಗಿದಡೇಂ ಗುರುಮೂರ್ತಿಶಂಕರಾ॥ ॥೫೪॥

ಎಡೆವಿಡದಡ್ಡಣಂಗಳ ಕಠಾರಿಯ ಕತ್ತಿಯ ಮೊತ್ತವೆತ್ತಲೊ
ಗ್ಗೊಡೆಯದೆ ನಾಡೆ ನೋಡಶಿವೆ ಸೀವವೊಲಿಪ್ಪರ ಸಾಲ್ಗಳೈದೆ ತಂ ।
ಮೊಡಲಭಿಘಾತದಿಂದಿಳೆಯೊಳಾಗಳೆ ಬೀಳ್ದಡೆ ಬೆನ್ನ ಧೂಳಿಯಂ
ತೊಡೆವವರೊರ್ವರಿಲ್ಲಿದು ವಿಚಿತ್ರತರಂ ಗುರುಮೂರ್ತಿಶಂಕರಾ ॥* ॥ ೫೫ ॥

---

1 ಕಪ್ರ [ಗ] ಕಂ ತ್ರಯಾ (ಚ) 2 ಕಳಾಸಜು [ಚ]; ದೊಳಾಸರಂ [ಗ] 3 ಳ್ ನಾಸ್ತಿ [ಗ] ಳನಾಸ್ತಿ [ಚ] 4 ಸುಡು [ಗ] 5 ದೊಂದು ತಂಕಲೆ [ಚ] 6 ವುದೆ ಚಿಂತೆ [ಚ] 7 ಸ್ಥೆ [ಚ] 8 ವಾರ್ತೆ [ಚ] 9 ವೆಲ್ಲವಂ [ಚ] 10 ಹುವಿಚ್ಛೆ [ಚ] 11 ರೆ [ಚ] 12 ಕಾಣಿಸದೈ [ಚ] 13 ರ್ವಿ [ಚ] 14 ಸ್ವ [ಗ, ಚ] 15 ಬಹುಪ್ರಧಾನ [ಗ] 16 ರ್ವರಿಸಿ ಕೇಳ್ವರೆಲೆ [ಚ] † 'ಚ' ಪ್ರತಿಯಲ್ಲಿ ಈ ಪದ್ಯದ ಕೆಲವು ಪದಗಳು ಕೈ ಬಿಟ್ಟು ಹೋಗಿರುವುದರಿಂದ ಛಂದಸ್ಸು ಕೆಟ್ಟಿದೆ 17, 18 ತೆ [ಗ] 19 ತ್ತವಂದಣದೆ [ಗ] 20 —· [ಗ] 21 ಬಳಿಂಕಾ [ಗ]; ಬಳಿಕ್ಕಾ [ಚ] 22 ಹಸು [ಗ] ವಸು [ಚ] * 'ಚ' ಪ್ರತಿಯಲ್ಲಿ ಈ ಪದ್ಯವಿಲ್ಲ.

೫೬ ಎಲೈ ಗುರುಮೂರ್ತಿಶಂಕರನೆ, ಒಂದು ಅರೆಕಾಣಿ ಬಡ್ಡಿ ದೊರಕುವ ದಾದರೆ ಇರುವ ಹಣವನ್ನೆಲ್ಲ ತಂದು ಬೇರೆಯವರಿಗೆ ಕೊಟ್ಟು ಒಣಗಿ ಬಾಳಕದಂತೆ ಬತ್ತಿ ಸಾಯುವೆನು. ಇಂದು ನಾನು ಅರೆಕಾಣಿಯನ್ನು ಭಕ್ತಿಯಿಂದ ನಿಮಗರ್ಪಿಸಿ ಮುಂದೆ ದಿವ್ಯಭೋಗವನ್ನು ಸದಾ ಪಡೆಯುವುದನ್ನು ನೆನೆಯುವೆನು.

೫೭ ಇಷ್ಟು ಶಿವಾಲಯಕ್ಕೆ, ಇಷ್ಟು ಭಕ್ತಜನರಿಗೆ, ಇಷ್ಟು ಶಿವಾರ್ಪಣಕ್ಕೆ, ಇಷ್ಟು ಮಹೋತ್ಸವಕ್ಕೆ ಎನ್ನುತ್ತ ದ್ರವ್ಯವನ್ನು ಈ ರೀತಿ ಪ್ರಯೋಜನಗೊಳಿಸಿದುದಿಲ್ಲ. ಇಷ್ಟು ಸ್ವೇಚ್ಛಾಗೃಹಕ್ಕೆ, ಇಷ್ಟು ದುರ್ಜನಕ್ಕೆ, ಇಷ್ಟು ಆತ್ಮಪೋಷಣೆಗೆ, ಇಷ್ಟು ಪ್ರಣಯೋತ್ಸವಕ್ಕೆ ಎನ್ನುತ್ತ ಧನವನ್ನು ನಾನು ಅಪವ್ಯಯಮಾಡಿದೆನು.

೫೮ ಹುತ್ತ ಬೆಳೆಯುವಂತೆ ಪಾಪವು ಸ್ವಲ್ಪಸ್ವಲ್ಪವಾಗಿ ಕೂಡಿಕೊಂಡು ಬರುತ್ತಿದೆ. ಕಾಡಿಗೆಯ ರಾಶಿಯಂತೆ ಆಯುಃಪ್ರಮಾಣವು ಅಲ್ಪಅಲ್ಪವಾಗಿಯೇ ತೀರುತ್ತ ಬರುತ್ತಿದೆ ಎಂದು ಆಪ್ತರು ಪ್ರತಿದಿನ ಎಚ್ಚರಿಸಿದರೂ ಮನಸ್ಸು ಒಪ್ಪದು. ಎಳೆದು ನೀವಿದರೆ ನಾಯಿಯ ಕುಡಿಬಾಲವೇನು ನೇರವಾಗುವುದೆ ?

೫೯ ನೆಲನೊಡೆಯನು ಬಯ್ದರೆ ಸರಸವಾಡಿದನು ಎನುತ್ತ, ತಪ್ಪು ಹೊರಿಸಿ ಸಾಯುವಂತೆ ಸದೆಬಡಿದರೆ ಬುದ್ಧಿಹೇಳಿದನು ಎನುತ್ತ, ಧನವನ್ನು ಅಪಹರಿಸಿದರೆ ತಾನೇ ಕೊಟ್ಟು ತಾನೆ ತೆಗೆದುಕೊಂಡನೆನ್ನುತ್ತ, ನೂಕಿದರೆ ಬಾಗಿಲಲ್ಲಿ ಇರುವೆನೆನ್ನುತ್ತ ಆತನು ಕೊಟ್ಟ ಐದು ಹಣಕ್ಕೆ ದೇಹವನ್ನು ಮಾರಿ ಹೊಟ್ಟೆಹೊರೆದೆನು.

೬೦ ಒಮ್ಮೆ ನಿಂದಿಸುವರು, ಒಮ್ಮೆ ಭಂಗಿಸುವರು, ಒಮ್ಮೆ ಬಳಲಿಸುವರು, ಒಮ್ಮೆ ರೋಷದಿಂದ ಹೊಯ್ಯುವರು, ಒಮ್ಮೆ ಮೃತ್ಯುವಿನೆಡೆಗೆ ನೂಕುವರು, ಒಮ್ಮೆ ಸೂರೆಗೊಂಡು ಹೊನ್ನನ್ನು ಸೆಳೆದೊಯ್ಯುವರು ; ಚೀಃ ಸುಡು. ನರಾಧಮರ ಸೇವೆಯನ್ನು ಮಾಡಲಾರೆ. ಇನ್ನು ಮಾಡುವುದೇನು ? ನಿಮ್ಮನ್ನು ನಿಮಿಷವಾದರೂ ಓಲಗಿಸುವೆನು.

ಒಂದವರೆಗಾಣೆ ಬಡ್ಡಿ ದೊರೆಕೊಂಡಡೆ ವಿತ್ತಮನುಳ್ಳುದೆಲ್ಲಮಂ
ತಂದು ಪೆಱರ್ಗೆ ಕೊಟ್ಟೊಣಗಿ [1]ಬಾಳಕದಂದದಿ ಬತ್ತಿ[1] ಸಾವೆ[2]ನಾ[2] ।
ನಿಂದರೆಕಾಣಿಯಂ ನಿಮಗೆ ಭಕ್ತಿಯೊಳರ್ಪಿಸಿ ದಿವ್ಯಭೋಗಮಂ
ಮುಂದೆ ನಿರಂತರಂ ಪಡೆವುದಂ ನೆನೆವೆಂ ಗುರುಮೂರ್ತಿಶಂಕರಾ ॥ ॥ ೫೬ ॥

ಇನಿತು ಶಿವಾಲಯಕ್ಕಿನಿತು ಭಕ್ತಜನಕ್ಕಿನಿತೀಶ್ವರಾರ್ಪಣ
ಕ್ಕಿನಿತು ಮಹೋತ್ಸವಕ್ಕೆನುತೆ ವಿತ್ತ[3]ವ[3]ನೀಪರಿ [4]ಬಾಳ್ಕೆಗೈದು[4]ದಿ ।
ಲ್ಲಿನಿತು ವೃಥಾಲಯಿಕ್ಕಿನಿತು [5]ಧೂರ್ತಜನಕ್ಕಿ[5]ನಿತಾತ್ಮಪೋಷಣ
ಕ್ಕಿನಿತು [6]ರತೋ[6]ತ್ಸವಕ್ಕೆನುತೆ ನೀಗಿದೆನಾಂ ಗುರುಮೂರ್ತಿಶಂಕರಾ ॥ ॥ ೫೭ ॥

ಇನಿತಿನಿತಾಗಿ ಕೂಡುತಿದೆ ಪುತ್ತಿ[7]ನ[7] ಪೆರ್ಚುಗೆಯಂತೆ ಪಾಪ ಮ
ತ್ತಿನಿತಿನಿತಾಗಿ [8]ತೀರುತಿದೆ[8] ಕಾಡಿಗೆಯೊಬ್ಬುಳಿಯಂತಿರಾಯುವೆಂ ।
ದನುದಿನಮಾಪ್ತರೆಚ್ಚಱಿಸೆ ಚಿತ್ತವೊಡಂಬಡ[9]ದೀಳ್ದು ನೀವೆ[9] ಶ್ವಾ
ನನ ಕುಡಿಬಾಲವೇನ್ ಸಸಿ[10]ನವಪ್ಪುದೆ[10] ಪೇಳ್ಗುರುಮೂರ್ತಿಶಂಕರಾ ॥ ॥ ೫೮ ॥

ಬಯ್ದಡೆ ಮೇಳವಾಡಿದನೆನುತ್ತಪರಾಧವ[11]ನಿಟ್ಟು[11] ಸಾವವೊ
ಲ್ಪೊಯ್ದಡೆ ಬುದ್ಧಿವೇಳ್ದನೆನುತರ್ಥಮನೊಯ್ದಡೆ ತಾನೆ ಕೊಟ್ಟು ತಾ ।
ನೊಯ್ದವೆನುತ್ತೆ ನೂಂಕಿದೊಡೆ ಬಾಗಿಲೊಳಿ[12]ರ್ಪೆನೆನುತ್ತಲಾ[12]ಳ್ದನಿ
ತ್ತಿಯ್ದು ಪಣಕ್ಕೆ ಮಾಱಿ ತನುವಂ ಪೊರೆದೆಂ ಗುರುಮೂರ್ತಿಶಂಕರಾ ॥ ॥ ೫೯ ॥

ಬಯ್ವರದೊಮ್ಮೆ ಭಂಗಿಸುವರೊಮ್ಮೆ [13]ಬಳಲ್ಚು[13]ವರೊಮ್ಮೆ[14] ರೋಷದಿಂ[14]
ಪೊಯ್ವರದೊಮ್ಮೆ ಸಾವೆಡೆಗೆ ನೂಂಕುವರೊಮ್ಮೆ[15] ಕವರ್ತುಕೊಂಡು ಪೊ ।
ಸ್ನೊಯ್ವ[15]ರದೊಮ್ಮೆ ಚಿಃ ಸುಡು ನರಾಧಮರೋಲಗಕಾಱನಾಱನೇ
[16]ಗೆಯ್ವೆನೊ[16] ನಿಮ್ಮ[17]ನಾಂ ನಿಮಿಷಮೋ[17], [18]ಲಗಿ[18]ಪೆಂ ಗುರುಮೂರ್ತಿ
ಶಂಕರಾ ॥ ॥ ೬೦ ॥

---

1 ಬಾಡುತೆ ದಂಡಕೆ ಬತ್ತಿ [ಗ] ಬಾಕುಳದಂದದಿ ಬತ್ತಿ [ಚ] 2 ನಾಂ [ಗ, ಚ] 3 ಪ [ಗ] 4 ಬಾಳ್ತನಿಲ್ಲ [ಚ] 5 ದುರ್ಜನಕಿಂತಿ [ಗ] 6 ವ್ಯದೋ [ಚ] 7 ದ [ಗ] 8 ಕೂಡುತಿದೆ [ಚ] 9 ದಿರ್ಪೆನೀವೆ [ಗ] ದೀಳ್ದುನೀನೆ [ಚ] 10 ನೆರ್ಬಳುದೆ 11 ನಿತ್ತು [ಚ] 12 ಪ್ಪೆನೆನುತ್ತ ಪಾ [ಚ] 13 ಬಳಲ್ಸು [ಚ] 14 ಕೋಪದಿಂ [ಚ] 15 ಕವರ್ತೆಗೈವ [ಚ] 16 ಗೆಯ್ದಪೆ [ಗ] 17 ನಿಮ್ಮನೇನೀಸೋ [ಚ] 18 ಲ್ಗೈ [ಗ]

೬೧ ಹೆಡೆನಾಗರನ್ನು ಹಿಡಿದು, ಹೆಬ್ಬುಲಿಯನ್ನು ಎದುರಿಸಿ, ಮದ್ದಾನೆಯನ್ನು ಕೆರಳಿಸಿ, ಕುಂಟಣಗಿತ್ತಿಯಂತೆ ಕಂಡಕಂಡಲ್ಲಿಗೆ ಹೋಗಿ, ಕೀಳು ಜನರಿಗೆ ಮಣಿದು, ಸಮರರಂಗದಲ್ಲಿ ಹೋರಾಡಿ, ಸಾಗರದೊಳಗೆ ಮುಳುಗಿ ಏಳುತ್ತ, ನರಾಧಿಪರಿಗೆ ನಡುಗಿ ಛೀ, ಹುಲ್ಲಿಗಿಂತ ಕಡೆಯಾಗಿ ಹಾಳು ಹೊಟ್ಟೆಯನ್ನು ಹೊರೆಯುವೆನು.

೬೨ ಅವರಿವರು ಹೇಳುವ ಮಾತುಗಳನ್ನಾಲಿಸಿ ಪಾಳುಭೂಮಿಯತ್ತ ಹೋಗಿ, ರಾತ್ರಿಯಲ್ಲಿ ತ್ವರೆಯಿಂದ ಅತ್ತಲಿತ್ತ ಅಗೆದು ಎತ್ತಿದರೆ ಮೂಳೆಗಳಿರುವುವು ; ಇದ್ದಿಲಿರುವುವು ; ಹೊಟ್ಟನರಾಶಿ ಇರುವುವು ; ಒಡೆದ ಹಂಚುಗಳಿರುವುವು ; ಭೂತಗಳು ಅಟ್ಟಿಸಿಕೊಂಡು ಬರುವುವು ; ಆದರೂ ಧನಾಪೇಕ್ಷೆ ಒಂದಿಷ್ಟೂ ಬಿಟ್ಟು ತೊಲಗದು.

೬೩ ಗಾಳಿಯನ್ನು ಊದಿದ ಬಾಯಿಗೆ ಬೂದಿ ಹಾರಿತು ; ಬಡಿಯುತ್ತಿದ್ದ ಕೈಗೆ ಬೆಂಕಿಯ ಬಿಸಿ ತಾಕಿ ಕಪ್ಪಾಯಿತು ; ಕಾಣುವ ಕಣ್ಣಿಗೆ ಹೊಗೆ ಸುತ್ತಿತು. ಮೊದಲು ನನ್ನಲ್ಲಿದ್ದ ಹಣವೆಲ್ಲ ಹಾಳಾಯಿತು. ತಳವಾರರ ಸಂಕೋಲೆಯ ಕಂಡಿಯಲ್ಲಿ ಕಾಲು ಸಿಕ್ಕಿಬಿದ್ದಿತು. ಎಲೈ ಗುರುಮೂರ್ತಿಶಂಕರನೆ, ಈ ಐಶ್ವರ್ಯವನ್ನು ವಾದ (ರಸ) ವಿದ್ಯೆಯಿಂದ ಗಳಿಸಿದೆನು. †

೬೪ ರಾಜನು ನಿನ್ನನ್ನೇ ಮನ್ನಿಸುವನು ಎಂದ ದಿನ ಹೋಗಲು, ಆತನು ಆ ದಿನ ಕಣ್ಣೆತ್ತಿಯೂ ನೋಡನು. ನಿನ್ನನ್ನೇ ತರುಣಿ ಮೆಚ್ಚುವಳೆಂದಾಗ ಹೋದರೆ, ಆ ದಿನ ಆಕೆ ಸ್ವಲ್ಪವೂ ಲಕ್ಷಿಸಳು. ನಿನ್ನನ್ನೇ ಆ ಜನಸಮೂಹ ಪ್ರೀತಿಸುವುದು ಎಂದ ದಿನ ಹೋದರೆ, ಆ ಗುಂಪು ಬಯ್ಯುವುದು. ವಂಚನೆಯ ವಶ್ಯ (ಕಾಮ) ತಂತ್ರದಿಂದ ಬಳಲಿ ಬಡವಾಗಿದ್ದೇನೆ.

೬೫ ವೇದಗಳಲ್ಲಿ ಹೇಳಿದ ನಿತ್ಯಕರ್ಮವನ್ನು ತಪ್ಪದೆ ಮಾಡೋಣವೆಂದರೆ ಮಾಡದಿರುವೆನು ; ಆ ಯಜ್ಞವೇ ಮೊದಲಾದುವನ್ನು ನೆನೆಯಲು ಶಕ್ತನೇ ! ಅಬ್ಬಾ! ಬಿಸಿನೀರಿಗೆ ಬೆಚ್ಚುವ ನಾನು ಹೋಮಾಗ್ನಿಯನ್ನು ಹೊಗಳಲು ಮನಗೊಡುವೆನೆ! ಎಲೈ ಗುರುಮೂರ್ತಿಶಂಕರನೇ, ನನಗೇಕೆ ಸ್ವರ್ಗದ ಬಯಕೆ ? ನೀನೇ ಗತಿ ಎನ್ನಲು ಬಲ್ಲೆನಲ್ಲದೆ ಬೇರೊಂದರಿಯೆನು.

---

† ಪಾದರಸದಿಂದ ಚಿನ್ನವನ್ನು ಮಾಡಿ ಶ್ರೀಮಂತನಾಗಬಹುದು ಎಂಬ ದುರಾಸೆಗೆ ಈಡಾಗಿ ಇದ್ದ ಹಣವನ್ನೆಲ್ಲ ಕಳೆದುಕೊಂಡು ಕಡೆಗೆ ತಳವಾರರ(ಪೋಲೀಸಿನವರ)ಕೈಗೆ ಸಿಕ್ಕಿಬಿದ್ದು ನರಳುವವನ ಗತಿಯನ್ನು ಕವಿ ಈ ಪದ್ಯದಲ್ಲಿ ಚಿತ್ರಿಸಿದ್ದಾನೆ. ವಾದವಿದ್ಯೆಯಿಂದ ಬರುವ ಫಲ ಸುವರ್ಣ ಸಂಪತ್ತಲ್ಲ, ದ್ರವ್ಯಹಾನಿ, ಜೊತೆಗೆ ಮಾನಹಾನಿ ಎಂಬುದನ್ನು ಕವಿ ಮಾರ್ಮಿಕವಾಗಿ ಮನಗಾಣಿಸಿದ್ದಾನೆ.

ಫಣಿಯುನವುರ್ಚಿ ಪೆರ್ಬುಲಿಗಿದಿರ್ಚಿ ಮದದ್ವಿಪಮಂ ಕೆರಳ್ಚಿ ಕುಂ
ಟಣಿಯುವೊಲಾಗಿ ಕಂಡೆಡೆಗೆ ಪೋಗಿ ಕುಜಾತಿಗೆ ಬಾಗಿ ಸಂಗರಾಂ।
ಗಣಮೊಳಗಾಡಿ ಸಾಗರದೊಳಾಳು[1]ತ ಮೂಡಿ[1] ನೃಪರ್ಗೆ[2] ಕೋಡಿ[2] ಚಿಃ
ತೃಣಲಘುವಾಗಿ ಬೆಂದ ಬಸುಱಿಂ [3]ಪೊರೆವೆಂ[3] ಗುರುಮೂರ್ತಿಶಂಕರಾ ॥ ॥ ೬೧ ॥

ಅವರಿವರೆಂಬ ಮಾತುಗಳನಾಲಿಸಿ [4]ಪಾೞಿಡೆಗೈದಿ[4] ರಾತ್ರಿಯೊಳ್
ತವಕದಿನತ್ತಲಿತ್ತಮಗುಳ್ದೆ*ತ್ತಿದಡಸ್ಥಿಗಳಿರ್ಪವಿದ್ದಲಿ।
ರ್ಪವು ತುಷರಾಶಿ [5]ಯಿರ್ಪವೊಡೆ[5]ಹಂಚುಗಳಿರ್ಪವು ಭೂತವಟ್ಟ ಬ
ರ್ಪವು ಧನದಾಸೆ ಮತ್ತೆ ಬಿಡದೊಂ[6]ದಿ[6]ನಿತುಂ ಗುರುಮೂರ್ತಿಶಂಕರಾ ॥ ॥ ೬೨ ॥

[7]ಊದಿದ[7]ಬಾಯ್ಗೆ ಬೂದಿ ಸಲೆ [8]ಪಾಯ್ದುದು[8] ಮರ್ದಿಸುತಿರ್ದ ಕೈಗೆ ಕಂ
ಡಾದುದು ಕಾಣ್ಬ ಕಣ್ಗೆ ಪೊಗೆ [9]ಪೊಯ್ದುದು[9] ಮುನ್ನೆನಗುಳ್ಳ ಪೊನ್ಪಣಂ।
ಪೋದುದು ಪಜ್ಜೆ [10]ಯೇ[10]ಱದ [11]ತಳಾ[11]ಱರ ಕೋಳದ ಕಂಡಿಯಲ್ಲಿ ಕಾ
ಲ್ಪೋದುದು ವಾದದಿಂ [12]ಪಡೆದೆನೀ[12] ಸಿರಿಯಂ ಗುರುಮೂರ್ತಿಶಂಕರಾ ॥ ॥ ೬೩ ॥

ನಿನ್ನನೆ ಮನ್ನಿಪಂ ನೃಪತಿಯೆಂದಡೆ [13]ಪೋಗಲು[13] ನೋಡನಾ ದಿನಂ
ನಿನ್ನನೆ ಮಚ್ಚಿಪಳ್ತರುಣಿಯೆಂದಡೆ ಸಾರ್ದೊಡೆ ಸೀಯಳಾ ದಿನಂ।
ನಿನ್ನನೆ [14]ಕೂರ್ಪರ್ದಾ ನೆರವಿಯೆಂದಡೆ ಪೊರ್ದಲು[14]ಬಯ್ವುದಾ ದಿನಂ
ಗನ್ನ[15]ದ ವಶ್ಯ[15]ತಂತ್ರದಿ ಕರಂ [16]ಸಮೆದೆಂ[16]ಗುರುಮೂರ್ತಿಶಂಕರಾ ॥ † ॥ ೬೪ ॥

ಶ್ರುತಿಯುತ ನಿತ್ಯಕರ್ಮವನು ತಪ್ಪದೆ ಮಾಡಲು ಮಾಡದಿರ್ಪನಾ
ಕ್ರತು ಮೊದಲಾದುವಂ ನೆನೆಯಲಾರ್ಪನೆ ಹೋ! ಬಿಸಿನೀರ್ಗೆ ಬೆಚ್ಚುವೆಂ।
ಹುತವಹನಂ ಪೊಗಳ್ಪಗೆವೆನೇನೆನಗೇಕೆಲೆ ಸಗ್ಗದಿಚ್ಛೆ ನೀಂ
ಗತಿಯೆನೆ ಬಲ್ಲೆ ನಲ್ಲದಱಿಯೆಂ ಪೆಱತಂ ಗುರುಮೂರ್ತಿಶಂಕರಾ ॥ * ॥ ೬೫ ॥

---

1 ತೆ ಮೂಢ [ಗ] 2 ಖೋಡಿ [ಗ] 3 ಪಡೆದೆಂ [ಗ] ಪೊರೆದೆಂ [ಚ] 4 ಪಾಡೆಳೆಗೆಯ್ದು[ಚ] 5 ಯಿರ್ಪುದೊಡೆ [ಚ] 6 ದೆ [ಚ] 7 ಊಡಿದ [ಚ] 8 ಪೊಯ್ದುದು [ಗ] ಪಾಯ್ವುದು [ಚ] 9 ಪಾಯ್ದುದು [ಚ] 10 ಯ [ಚ] 11 ತಳವಾ [ಚ] 12 ಪಡಗಿ [ಚ] 13 ಪೋದೊಡೆ [ಚ] 14 ಕೂರ್ಪಪನ್ನೆರವಿಯೆಂದೆನೆ ಪೋದೊಡೆ [ಚ] 15 ದಿನಸ್ಯ [ಗ]; ದವಸ್ಯ [ಚ] 16 ದಣದೆಂ [ಚ] * ಈ ಪದ್ಯ 'ಚ' ಪ್ರತಿಯಲ್ಲಿಲ್ಲ. † ಈ ಪದ್ಯದ ಬಳಿಕ ಬರುವ ಮುಂದಿನ ಪದ್ಯವಿದು:—

† ಕಾಮದಿ ಕೋಪದಿಂ ಮದದಿ ಲೋಭದಿ ಮತ್ಸರದಿಂ ವಿಮೋಹದಿಂ
ಕಾಮುಕನಾಗಿ ಕಾದಿ ಕೆಡೆದಳ್ಕದೆ ಸೊಕ್ಕಿದನಕ್ಕ ಸಿಕ್ಕಿನಾ।
ನಾ ಮುಖದಿಂದೆ ವಂದ್ಯರನೆ ನಿಂದಿಸಿ ಮೈಮಱೆದಿರ್ದನೆನ್ನ ಬಾ
ಳ್ಪೀಮೆಗೆ ಸಂದುದಿನ್ನು ಸಲಹಲಾಗದೆ ಪೇಳ್ಗುರುಮೂರ್ತಿಶಂಕರಾ ॥ ॥ ೬೨ ॥

೭೬ ತತ್ತ್ವಜ್ಞಾನದ ಒಂದೆರಡು ಕಲಿಕೆಯ ಮಾತುಗಳನ್ನಾಡಿ ಮಹಾ ಯೋಗೀಶ್ವರರ ಕೈಗೆ ಸಿಕ್ಕದ ಪರಬ್ರಹ್ಮವನ್ನು ಹಿಡಿಯುವುದಕ್ಕೆ ತೊಡಗಿ ಅತ್ತ ಅದು ಸಾಧ್ಯವಾಗದೆ, ಕರ್ಮವನ್ನು ಇತ್ತ ಕಳೆಯಲು ಹೊರಟು ಎರಡಕ್ಕೆ ಬಿಟ್ಟ ಕರುವಿನಂತಾಗಿ ಕೆಲವರು ಕೆಡುತ್ತಿರುವರು. 'ಆ ಪರವಸ್ತುವೇ ನೀನಾಗಿದ್ದೀಯೆ' ಎಂಬ "ತತ್ತ್ವಮಸಿ" ಮಹಾವಾಕ್ಯದ ಅರ್ಥಕ್ಕೆ ಈಗ ನಾನು ಹೇಗೆತಾನೆ ಸಮರ್ಥನೆಯಾಗಬಲ್ಲೆ ?

೭೭ ಎರಚಿದ ಕಾಯಿತುರಿಯೇ ಮೊದಲಾದ ಸೂಸಲಿನ ಆಸೆಗೆ ಇಲಿಗಳು ಬಲೆಯಲ್ಲಿ ಬೀಳುವಂತೆ ಸುಗಂಧಮಯವಾದ ಹೂಮಾಲೆಯನ್ನು ಮುಡಿದ ಸ್ತ್ರೀಯ ವದನಕಟಾಕ್ಷದ ಉಜ್ವಲ ಸೌಂದರ್ಯಕ್ಕೆ ಸಿಕ್ಕಿ ಪುರುಷನು ಬಲಿಯಾಗಿರಲು ಕಾಲಯಮನು ಹೇಳದೆ ಕೇಳದೆ ಸೆಳೆದೊಯ್ದು ಬಹುಭಯಂಕರವಾದ ಸಂಕಟಕ್ಕೊಳಗು ಮಾಡನೆ ?

೭೮ ದೇಹ ಎಂದೆಂದಿಗೂ ಅಳಿಯದ ದೇಹವಾದರೆ, ಇಂದ್ರಿಯನಿಗ್ರಹ ಮಾಡದವರಿಗೆ ಅಧಿಕ ಸಂಪತ್ತು ದೊರೆಯುವುದಾದರೆ, ದೇವೇಂದ್ರನ ಭೋಗವು ನಿತ್ಯ ನಿರಂತರವೆನಿಸಿದರೆ, ಶೌರ್ಯಾತಿಶಯಕ್ಕೆ ಭಂಗಬಾರದಿದ್ದರೆ, ಜ್ಞಾನ ಲಭಿಸುವುದಾದರೆ ಅಯ್ಯೋ ! ಹಳಿಯುವುದೇಕೆ ? ಸಂಸಾರವೇ ನಮಗೆ ಮಹದಾಶ್ರಯ.

೭೯ ಆ ನೀಳವಾದ ಕಣ್ಣುಗಳು, ಸುಂದರವಾದ ಮುಖ, ತುಂಬಿದ ಎದೆ, ಗಾತ್ರವಾದ ಜಘನ, ಮನ್ಮಥ ಚೇಷ್ಟೆಯ ಮಾತುಗಳು, ನವೀನವಾದ ಸೊಬಗು ಎಂಬಿವನ್ನು ಧ್ಯಾನಿಸಿ ಕಾಣುವುದೇ ನರಕವಲ್ಲವೆ? ಎಲೈ ಗುರುಮೂರ್ತಿಶಂಕರನೇ, ನಿಮ್ಮ ಪಾದಧ್ಯಾನವನ್ನೊಮ್ಮೆ ಮಾಡಲು ಮೋಕ್ಷಲಕ್ಷ್ಮಿ ಒಲಿದು ನೋಡಳೆ ?

* 'ಚ' ಪ್ರತಿಯಲ್ಲಿ ಮುಂದೆ ಈ ಪದ್ಯವಿದೆ :—

ಭೌತಿಕ ದೈವಿಕಾತ್ಮಿಕಮನಸ್ತ್ರಿವಿಧಾಧಿಗಳಿಂದೆ ಬೇವಡಂ
ವಾತ ಕಫಾತಿಸಾರ ಬಹುರೋಗ ಸಮುದ್ರದೊಳಾಳ್ದು ನೋವಡಂ ।
ಪ್ರೇತ ಪಿಶಾಚ ಭೂತಮುಖಘಾತಕ ಜಂತುಗಳಿಂದೆ ಸಾಯ್ವಡಂ
ಭೂತಳದಲ್ಲಿದೇ ನರಕವಲ್ಲದೆ ಪೇಳ್ಗುರುಮೂರ್ತಿಶಂಕರಾ ॥ ॥ ೭೮ ॥

ಕಣ್ಕೆಯ ಮಾತನೊಂದೆರಡನಾಡಿ ನೆಗಳ್ತೆ[1]ಯ[1] ಯೋಗಿಗಳ್ಗೆ ಕೈ
ಸಿಲ್ಕದ ಬೊಮ್ಮಮಂ ತುಡುಕಲ[2]ತ್ತಲದಾಗದೆ[2] ಕರ್ಮವಿತ್ತ ನೀ ।
ಗಣ್ಕೆರಡಕ್ಕೆ ಬಿಟ್ಟ ಕಜಿಬಾಗಿ ಕೆಲರ್ಕೆಡುತಿರ್ಪರೀಗ[3]ಳಾಂ[3]
ನಿಲ್ಕುವೆನೆಂತು ತತ್ತ್ವಮಸಿಯರ್ಥಕೆಲೇ ಗುರುಮೂರ್ತಿಶಂಕರಾ ॥ † ॥ ೬೬ ॥

ಸೂಸಿದ ಸೂಸಲಾ[4]ಸೆ[4]ಗಿಲಿಗಳ್ಬಲೆಯೊಳ್ಕೆಡೆವಂತೆ ಗಂಧ ಮಾ
ಲಾಸುದತೀಮುಖೇಕ್ಷಣ[5]ದ ಬೇಳ್ವೆಯ ಚೆಲ್ವಿಗೆ[5] ಸಿಲ್ಕಿ ಮಾನವಂ ।
ಮೋಸದಿನಿರ್ಪಿ[6]ನಂ[6] ಬಳಿಕ ಹೇಳದೆ ಕೇಳದೆ ಕಾಲನೊಯ್ದು ಕ
ಟ್ಟಾಸುರಮಾದ ಬಾಧೆಗೊಳಗಾಗಿಸನೇ ಗುರುಮೂರ್ತಿಶಂಕರಾ ॥ * ॥ ೬೭ ॥

ಅಳಿಯದ ದೇಹಮಾದಡಖಿಳೇಂದ್ರಿಯಪಾ[7]ಟವ[7] ಮಾಡ[8]ದರ್ಗೆ ವಾ[8]
ಗ್ಗಳಿಸಿದ ಲಕ್ಷ್ಮಿಯಾದಡಮಪೇಶ್ವರ ಭೋಗಮಜಸ್ರಮಾದಡ ।
ಸ್ಖಲಿತ ಪರಾಕ್ರಮಪ್ರಸರಮಾದಡಭಿಜ್ಞತೆಯಾದಡಕ್ಕಟಾ
ಪಳಿಯಲವೇಕೆ [9]ಸಂಪರ[10]ಣಮೇ[10] ಶರಣಂ ಗುರುಮೂರ್ತಿಶಂಕರಾ ॥ ॥ ೬೮ ॥

ಆ[11] ನಿಡಿಗಂಗ[11]ಳಾ [12]ಸೊಗಯಿಪಾನನವಾ ನಿ[12]ಬಿಡಸ್ತನಂಗಳಾ
ಪೀನ ನಿತಂಬವಾ [13]ಪದಿರುವಾ[13]ತುಗಳಾ ಪೊಸಗಾಡಿಯೆಂಬಿವಂ ।
[14]ಜಾನಿಸಿ ಕಾಣ್ಬುದೇ[14] ನರಕಮಲ್ತೆ ಭವತ್ಪದವೊಂದನೊಮ್ಮೆ [15]ಸಂ
ಧಾನಿಸೆ[15] ಮೋಕ್ಷಲಕ್ಷ್ಮಿ [16]ಪದೆದೀಕ್ಷಿಸಳೇ[16] ಗುರುಮೂರ್ತಿಶಂಕರಾ ॥ † ॥ ೬೯ ॥

---

† 'ಶ್ರೀಮತ್ಶಿವಗಣಪಾದಾರವಿಂದೇಭ್ಯೋನಮಃ । ನಿರಂತರಾಯೋಸ್ತು । ಅಥಜ್ಞಾನಸ್ಥಲಂ' ಎಂದು ಈ ಪದ್ಯದ ಮೊದಲಲ್ಲಿ ಸ್ಥಲಸೂಚನೆ ಮಾಡಿದೆ. 1 ಯೊ (ಗ) 2 ದತ್ತಲಾಗದೆ (ಗ) 3 ಳಾ (ಚ) 4 ಲೆ (ಚ) 5 ಕೆ ಸೌಖ್ಯದ ಬೇಳ್ವೆಗೆ (ಚ) 6 ನಿಂ (ಗ) 7 ತವ (ಚ) 8 ದಾರ್ಗೆಮ (ಚ) 9 +ದೇವ (ಗ) 10 ಮೆ (ಚ)

11 ನಿಡುಗಣ್ಣ (ಚ) 12 ಸೊಬಗಿನಾನನವಾಗಿ (ಗ) 13 ಸತಿಯಮಾ 14 ಧ್ಯಾನಿಸಿ ಕಾಣ್ಬುದೇಂ (ಚ) ಸ್ವೀಕೃತಪಾಠ [ಕ] 15 ಸಂಧಾನಿಸಿ (ಗ); ಸಂದಾನಿಸಿ (ಚ) 16 ಪುದಿದೀಕ್ಷಿಪಳ್ (ಚ)
† 'ಚ' ಪ್ರತಿಯ ಈ ವೃತ್ತದ ಅಂತ್ಯದಲ್ಲಿ 'ಇತಿ ವೈರಾಗ್ಯಸ್ಥಲಂ ಸಮಾಪ್ತಂ. ಮಂಗಳ ಮಸ್ತು' ಎಂಬೀ ಸ್ಥಲ ಸಮಾಪ್ತಿಯ ನಿರೂಪಣೆಯಿದೆ.

೭೦ ಸಕಲ ಶಾಸ್ತ್ರಗಳ ಜ್ಞಾನ, ಸರ್ವಜೀವ ಕಾರುಣ್ಯ, ವಿಷಯೇಂದ್ರಿಯ-ನಿಗ್ರಹ, ಚಿತ್ತಸಮತಾ ತತ್ತ್ವ, ಸುಖದುಃಖಗಳ ಸಮಾನ ಬುದ್ಧಿ—ಇವು ಯಾವುವೂ ಮೊದಲೇ ಇಲ್ಲದೆ ಮೋಕ್ಷಮಾರ್ಗದಲ್ಲಿ ಕಾಲಿಟ್ಟರೆ ಮಾಯೆ ಕುಪಿತಳಾಗಿ ಕಲಹ ಮಾಡಳೆ ?

೭೧ ರೋಗಿ ಅಪಥ್ಯವಾದ ಆಹಾರವನ್ನು ಬಯಸಿ ವ್ಯಾಪಕವಾದ ರೋಗವನ್ನು ನಿವಾರಿಸುವ ಮದ್ದಿಗೆ ಜುಗುಪ್ಸೆ ಪಡುವಂತೆ, ಭವರೋಗಿಯಾದವನು ತಾತ್ಕಾಲಿಕವಾಗಿ ಹಿತವಾದ ಜಾರ, ಚೋರ, ವಿಟ, ವೀರ ಕಥಾಕಾವ್ಯಗಳನ್ನು ಕೇಳಿ ಕಾಲವನ್ನು ಕಳೆಯುತ್ತ ಮೋಕ್ಷಶಾಸ್ತ್ರಕ್ಕೆ ಮನಗೊಡನು.

೭೨ ಜೀವನವೆಂಬ ಜಲವು ಆಲಿಕಲ್ಲಾದರೂ ಗಟ್ಟಿಗೊಂಡಿರದೆ ತಾರುಣ್ಯವನ್ನು ಕಳೆದುಕೊಂಡು ದುರ್ಗಂಧಮಯವಾದ ವಾಯುವಾಗುವಂತೆ ಜಡನಾದವನು ಕೆಲವು ಕಾಲದ ಬಳಿಕ ಯೋಗಿಯಾಗಿ ಸದ್ಭಾವನೆಯಳಿದು ಮರಳಿ ಜಡನಾಗಿ ಜಗತ್ತಿನಲ್ಲಿ ಬೀಳುವನು. ವಿಧಿ ಇಂಥ ದುರವಸ್ಥೆಗೆ ನನ್ನನ್ನು ಈಡುಮಾಡಿದೆ. ಎಲೈ ಗುರುಮೂರ್ತಿಶಂಕರನೆ, ಆ ಪರಬ್ರಹ್ಮವಸ್ತುವಿನಲ್ಲಿ ಒಂದುಗೂಡಿಸು.

೭೩ ಜ್ಞಾತೃ, ಜ್ಞೇಯ, ಜ್ಞಾನವೆಂಬ ತ್ರಿಪುಟಿಯ ವಿಭೇದವಾದ ಮೂರರ ಭಾವನೆ ಚಿತ್ತಕ್ಕೆ ಹೊಳೆದೂ ಹೊಳೆಯದು ; ಮನಸ್ಸು ಕಾಣುವೆನೆಂದರೆ ಆ ತತ್ತ್ವವಿಚಾರ ಅತ್ತಿತ್ತ ಸುಳಿದು ಮನಕ್ಕೆ ಸಿಲುಕದು. ತಮ್ಮ ಜ್ಞಾನಶಕ್ತಿಯಿಂದ ಪಂಚಭೂತ ತತ್ತ್ವಗಳನ್ನು ಐದುಮಡಿ ಮಾಡಿ ಆ ಇಪ್ಪತ್ತೈದು ತತ್ತ್ವಸಮೂಹದಿಂದ ನಿಮ್ಮನ್ನು ಕಾಣಲು ಯತ್ನಿಸುವ ತತ್ತ್ವಾನ್ವೇಷಿಗಳಿಗೂ ಆ ತ್ರಿಪುಟಿಜ್ಞಾನ ಅನಿರ್ದಿಷ್ಟವೆಂದಮೇಲೆ ಎಲೈ ಗುರುಮೂರ್ತಿಶಂಕರನೇ, ಇನ್ನು ನಿಮ್ಮ ನಿಜ-ಸ್ವರೂಪದ ಕುರುಹನ್ನು ತಿಳಿಯಲು ಯಾರಿಗೆ ತಾನೆ ಸಾಧ್ಯ ?

೭೪ ಕತ್ತಲೆಯಲ್ಲಿ ಸ್ಥಾಣು (ಮೋಟುಮರ) ವನ್ನು ನೋಡಿ ಕಳ್ಳನೆಂದು ಭಾವಿಸಿದರೆ ಕಳ್ಳನ ರೀತಿಯಲ್ಲಿ ಆ ಸ್ಥಾಣುವೇ ತನ್ನನ್ನು ಅಂಜಿಸುವುದಿಲ್ಲವೆ ? ಹಗ್ಗವನ್ನು ಕಂಡು ಹಾವೆಂದು ಭಾವಿಸಿದರೆ ಆ ಹಗ್ಗವೇ ಹಾವಿನಂತೆ ಹೆದರಿಸದೆ ? ಆತ್ಮನಲ್ಲಿಲ್ಲದ ಜೀವಭೇದದ ಭಾವನೆಯೆ ಹುಟ್ಟು ಸಾವಿನ ದುಃಖಕ್ಕೆ ಕಾರಣ.

ಮೊದಲೆ ಸಮಸ್ತ ಶಾಸ್ತ್ರದಱಿವಿಲ್ಲದೆ ಭೂತದಯಾವಿಶೇಷಮಿ
ಲ್ಲವೆ ವಿಷಯಪ್ರತಾನಜಯಮಿಲ್ಲದೆ [1]ಚಿತ್ತ ಸಮತ್ವತತ್ತ್ವಮಿ[1] |
ಲ್ಲವೆ ಸುಖದುಃಖ [2]ಸಂಕುಲ[2] ಸಮಾನತೆಯಿಲ್ಲದೆ ಮೋಕ್ಷಮಾರ್ಗದೊಳ್
ಪದವಿಡೆ ಮಾಯೆ ಮುಂದಲೆಗೆ ಪಾಯಳೆ ಪೇಳ್ಗುರುಮೂರ್ತಿಶಂಕರಾ ॥ ॥ ೨೦ ॥

ರೋಗಿಯಪಥ್ಯವಸ್ತುಗಳನಿಚ್ಛೆವಡುತ್ತ ಪ್ರೊದಳ್ದ ರೋಗಮಂ
ಪೋಗಿಸುವೌಷಧಕ್ಕೆ ಕಡು ಪೇಸುವವೊಲ್ ಭವರೋಗಿಯಾಗಳಿಂ— |
ಪಾಗಿರೆ ಜಾರ ಚೋರ ವಿಟ ವೀರಕಥಾಕೃತಿಗೇಳ್ದು ಕಾಲಮಂ
ನೀಗುತ ಮೋಕ್ಷಶಾಸ್ತ್ರದೆಡೆಗೆದ್ದೆಱಗಂ ಗುರುಮೂರ್ತಿಶಂಕರಾ ॥ ॥ ೨೧ ॥

ಜೀವನವಾರಿ ಕಲ್ಲೆನಿಸಿ ನಿಲ್ಲದೆ [3]ಜವ್ವನ[3]ವಾರಿ ಪೂತಿಗಂ
ಧಾ[4]ನಹ[4]ಮಪ್ಪ ಭಂದದೆ ಜಡಂ ಕೆಲ [5]ಕಾಲದಿ[5] ಯೋಗಿಯಾಗಿ ಸ |
ದ್ಭಾವನೆಗೆಟ್ಟು ಮತ್ತೆ ಜಡನಾಗಿ ಜಗಚ್ಚ್ಯುತನಪ್ಪ[6]ನೆ[6]ನ್ನನಿಂ
[7]ತೀವಿಧಿಗೆಯ್ದು[7]ದೊಂದಿಸೆಲೆ ತತ್ವದದೊಳ್ಗುರುಮೂರ್ತಿಶಂಕರಾ ॥ ॥ ೨೨ ॥

ಅಱುಹಿಸಿಕೊಳ್ವನೆಂಬಱಿವನೆಂಬ[8]ಱಿವೆಂಬ[8] ವಿಭೇದಮಾದ ಮೂ
ಱಱ ಬಗೆಗತ್ತ[9]ಲಿತ್ತ[9] ಮನವೀಕ್ಷಿಸಿ [10]ಕಾಣ್ಬೆಡೆಗತ್ತಲಿತ್ತ[10] ತ |
ನ್ನಱಿಕೆಯೊಳ್ಪೈ[11]ದಪ್ಪೈ[11]ವಡಿಪ ತತ್ತ್ವ[12]ಸಮೋಷ್ಟಿ[12]ಗಳತ್ತಲಿತ್ತ[13]ಲಿಂ[13]
ಕುಱುಹಿಡಲಾ[14]ರ್ಗೆ ತೀರ್ಕುಮೆಲೆ[14]ನಿಮ್ಮ ನಿಜಂ ಗುರುಮೂರ್ತಿಶಂಕರಾ ॥ ೨೩ ॥

ಸ್ಥಾಣುವಿನಲ್ಲಿ ಚೋರನೆನಿಪಾ ಬಗೆಗಂಡಡೆ ಚೋರನಂದದಿಂ
ಸ್ಥಾಣುವೆ ತನ್ನನಳ್ಕಿಸದೆ [15]ನೇಣ[15]ನದೊಂದಹಿಯೆಂದು ಕಂಡಡಾ |
ನೇಣಹಿಯಂತೆ ಬೆಚ್ಚಿಸದೆಯಾತ್ಮನೊಳಿಲ್ಲದ ಜೀವಭೇದಮಂ
ಕಾಣಲದೇ ಭವಭ್ರಮಣ[16]ದುಃಖಕರಂ[16] ಗುರುಮೂರ್ತಿಶಂಕರಾ ॥ ॥ ೨೪ ॥

---

1 ಚಿತ್ತವಸಂ ವಡದತ್ತವಿ (ಚ) 2 ಸಕಲ (ಚ) 3 ಜೀವನ (ಚ) 4 ಹವ(ಗ) 5 ಕಾಲದ(ಗ) 6 ಯೆ (ಚ) 7 ನೀ ವಿಧಿಗೆಯ್ಯು (ಚ) 8 — (ಗ) 9 ಲತ್ತ (ಚ) 10 ಕಾಣ್ಬುದನತ್ತಲತ್ತ (ಚ) 11 ಧದ್ರೈ (ಗ) 12 ಸಮಾಧಿ (ಚ) 13 ನೀಂ (ಗ) 14 ಗ ಜೀವನವೆ (ಚ) 15 ನೇಣೆ (ಗ) 16 ದುಷ್ಕೃತರಂಕ (ಗ)

೭೫ ಬಿಸಿಲ್ಗುದುರೆಯಲ್ಲಿ ನೀರೆಂಬ ಭ್ರಾಂತಿಯೂ, ಹಗ್ಗದಲ್ಲಿ ಹಾವೆಂಬ ಭ್ರಮೆಯೂ, ಬಿಳಿಯ ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯೆಂಬ ಭ್ರಾಂತಿಯೂ ತಟಕ್ಕನೆ ಹುಟ್ಟುವಂತೆ ಪರಿಶುದ್ಧ ಜ್ಞಾನಾತ್ಮನಲ್ಲಿ ವ್ಯರ್ಥವಾದ ಜಗತ್ತೆಂಬ ಭ್ರಾಂತಿ ತೋರುವುದು. ಅಬ್ಬಾ! ಸಂಯಮಿಗಳನ್ನೂ ಮುಳುಗಿಸಿದ ಈ ಭ್ರಾಂತಿಪಾಶವಾದರೂ ಸುಲಭ ಗೋಚರವೆ?

೭೬ ನೆಲವನ್ನು ಅಗೆದಾಗ ಕಾಲುವೆ, ಕೆರೆ, ಬಾವಿ, ಒರತೆ, ಬೆಂಚೆ, ಗಾರಿಗೆ, ಹಗೆಯ ಎಂಬ ಈ ಬೇರೆ ಬೇರೆ ಹೆಸರನ್ನು ಆ ನೆಲ ಪಡೆಯುವಂತೆ ಇಡೀ ಭೂಮಂಡಲದಲ್ಲೆಲ್ಲ ತೋರುವ ಚರಾಚರವೆಂಬ ರೂಪಭೇದದಿಂದ ಆತ್ಮನೊಬ್ಬನೇ ಎಣಿಕೆಗೆ ಮೀರಿದವನೆಂಬ ಭಾವನೆಯನ್ನುಂಟುಮಾಡುವನು.

೭೭ ಆಕಾಶವು ಹಲವು ಘಟಗಳಲ್ಲಿ ಹುದುಗಿದರೆ ಆ ಆಕಾಶವೇನು ಹಲವಾದುವೆ? ಸೂರ್ಯನು ಹಲವು ಜಲಪ್ರದೇಶಗಳಲ್ಲಿ ಹೊಳೆದರೆ ನಿಜವಾಗಿ ಸೂರ್ಯ ಹಲವಾರೆ? ಆತ್ಮನು ಹಲವು ಜನರಲ್ಲಿ ಹೊಳೆದರೆ ಆ ಆತ್ಮನೇನು ಹಲವೆ? ನಿಶ್ಚಿತ ಮತಿಗಳಿಗೆ ಆ ಭೇದ ವೈಶಿಷ್ಟ್ಯಗತವಾದುದು; ಇಲ್ಲವೆ ತೋರಿಕೆಯದು.

೭೮ 'ದೇಹವೇ ನಾನು' ಎನ್ನುತ್ತ ಅದರಲ್ಲಿ ಮೋಹಗೊಳ್ಳದೆ, ಸದ್ವಿವೇಚನೆಯಿಂದ ನಾನಾರೆಂದು ವಿಚಾರಿಸುತ್ತ ಗುರೂಪದೇಶ, ಶಾಸ್ತ್ರಜ್ಞಾನ ಮತ್ತು ಆತ್ಮಾನುಭವಗಳಿಂದ 'ಆ ಬ್ರಹ್ಮನೇ ನಾನು' ಎಂಬುದನ್ನು ಚಿತ್ಕಮಲದಲ್ಲಿ ಕರತಲಾಮಲಕವಾಗಿ ಕಾಣುತ್ತ 'ದೇಹ ನಾನಲ್ಲ' ಎನ್ನುತ್ತ ಮನಸ್ಸು ಗಟ್ಟಿಗೊಂಡರೆ, ಎಲೈ ಗುರುಮೂರ್ತಿಶಂಕರನೆ, ಅದೇ ನಿಮ್ಮ ನಿಜಸ್ವರೂಪ.

೭೯ ನನ್ನದೆಂದು ಭಾವಿಸುವ ಮಿತ್ರಭಾಗ್ಯ, ಧನಸಂಪತ್ತು, ಮನೆ, ಮಗ, ಮಡದಿ ಎಂಬಿವೆಲ್ಲವೂ ಚಿತ್ರರೂಪು. ಸತ್ಯಸ್ಥಿತಿಯನ್ನು ವಿವೇಚಿಸಿ ನೋಡಿದರೆ ಅವು ಬೇರೆಬೇರೆ. ತನ್ನಲ್ಲಿಯೇ ತನ್ನನ್ನು ಕಾಣುತ್ತ ತಾನು—ಬೇರೊಂದು ಎಂಬ ಭೇದವಿಲ್ಲದೆ ಎಲ್ಲವೂ ಪರಮಾತ್ಮ ಸ್ವರೂಪವೆಂಬುದನ್ನು ಮನಗಾಣಿಸು.

ಅಮಮ ಮರೀಚಿಕ ಪ್ರಸರದೊಳ್ಸಲಿಲಭ್ರಮೆ ಪಾಶದೊಳ್ ಫಣಿ-
ಭ್ರಮೆ [1]ಸಿತಶು[1]ಕ್ತಿಯಲ್ಲಿ ರಜತಭ್ರಮೆ ತೊಟ್ಟನೆ ಪುಟ್ಟುವಂದದಿಂ।
ವಿಮಲ ಚಿದಾತ್ಮನೊಳ್ [2]ಬಱ[2]ಯದೊಂದು [3]ಜಗದ್ಭ್ರಮೆ[3] ತೋರ್ಪು[4]ದೋ
ವೊ[4]ಸಂ
ಯಮಿಗ[5]ಳಿಗಾಳ್ದ[5] ಪಾಶಮಿ[6]ದು[6] ಗೋಚರಮೇಂಗುರುಮೂರ್ತಿಶಂಕರಾ ॥ ॥ ೭೫ ॥

[7]ಅಗುಳ್ದ*ಡೆ[7] ಭೂಮಿಯೊಂದೆ ಪರಿಕಾಲ್ ಕೆಱೆ ಬಾವಿಯೊಳಂತೆ ಬೆಂಚೆ [8]ಗಾ
ರಿಗೆ[8] ಪಗೆ[9]ಯಂಗಳೆಂಬ[9] ಪೆಸರಂ ಪಡೆ[10]ವಂದದೆ[10]ಯಾತ್ಮನೋರ್ವನೇ ।
ಜಗದಗಲಕ್ಕೆ ತೋಱುವ ಚರಾಚರರೂಪವಿಭೇದದಿಂದ ತಾ
ನಗಣಿತನಾದನೆಂಬ [11]ಬಗೆಗಾಣಿಸುವಂ[11] ಗುರುಮೂರ್ತಿಶಂಕರಾ ॥ ೭೬ ॥

ಪಲವು ಘಟಂಗಳೊ[12]ಳ್ಪುದಿದೊಡಾಗಸವೇಂ[12] ಪಲ[13]ವಾಯ್ತೆ ನಿಕ್ಕುವಂ[13]
ಪಲವು ಜಲಂಗಳೊಳ್ಪೊಳೆದಡರ್ಕನದೇಂ ಪಲವಾದನೇ ದಿಟಂ ।
ಪಲವು ಜನಂಗಳೊಳ್ಪೊಳೆದಡಾತ್ಮನದೇಂ ಪಲವಾದನೇ ನಿಜಂ
ನೆಲೆಯಱಿದರ್ಗೆ ಭೇದವದುಪಾಧಿಗತಂ ಗುರುಮೂರ್ತಿಶಂಕರಾ ॥ ॥ ೭೭ ॥

ದೇಹಮೆ[14]ಯಾನೆನುತ್ತಮದಱಿಂ[14]ಳ್ಮರುಳಾಗದೆ ಸದ್ವಿವೇಕದಿಂ
[15]ಕೋಹ[15]ಮೆನುತ್ತೆ ನೆತ್ತಿಮುಖದೊಳ್ ಗುರುಶಾಸ್ತ್ರ ನಿಜಾನುಭಾವದಿಂ ।
ಸೋಹಮೆನಿಪ್ಪುದಂ [16]ಕರತಳಾ[16]ಮಳಕೋ[17]ಪಮುಮಾಗಿ[17] ಕಾಣುತುಂ
ನಾಹಮೆನುತ್ತೆ ನಿಂದಡದು ನಿಮ್ಮ ನಿಜಂ ಗುರುಮೂರ್ತಿಶಂಕರಾ ॥ ॥ ೭೮ ॥

ಎನ್ನದೆನಿಪ್ಪ ಮಿತ್ರ ಧನ ಮಂದಿರ ಪುತ್ರ ಕಳತ್ರ [18]ಚಿತ್ರ[18] ತಾಂ
ತನ್ನಿಜವಂ[19] ವಿಚಾರಿ[20]ಸೆ[20] ವಿವೇಕದೊಳೊಯ್ಯನೆ ಬೇಱೆ[21]ಬೇಱೆ[21] ತಾಂ ।
[22]ತನ್ನೊಳೆ[22] ತನ್ನನೀಕ್ಷಿಸುತ ತಾನಿದಿರೆಂಬ ವಿಭೇದ[23]ವಿಲ್ಲದೆ
ಲ್ಲಂ[23] ನಿಜರೂಪಮೆಂಬ ಬಗೆಗಾಣಿಸು [24]ನೀಂ[24] ಗುರುಮೂರ್ತಿಶಂಕರಾ † ॥ ೭೯ ॥

---

1 ಸಿದಸೂ (ಗ) 2 ಪಂ (ಗ) 3 ಜೀವದ್ಭ್ರಮೆ (ಚ) 4 ದೊಂದು (ಗ) 5 ಳ ಗಾಢ (ಚ) 6 ಗೆ (ಗ) 7 ಅಗದರೆ (ಚ) 8 ಕಾಡಿಗೆ; 9 ಯೆಂಬ (ಚ) 10 ದಂದದಿ (ಚ) 11 ಪೆಸರಂ ಪಡೆದೇಂ (ಗ) 12 ಳ್ಪೊಳೆದಡಾತ್ಮನದೇಂ (ಗ) 13 ಮಾಯ್ತೆನಿಕ್ಕುಮೆ (ಗ) 14 ನುತ್ತ ಮತ್ತೆ ಮನದೊ (ಚ) 15 ಸೋಹ (ಚ) 16 ನರಕರಾ (ಗ) 17 ಸಮುದಾಗೆ (ಚ) 18 ಪೌತ್ರ ಚಿತ್ರಂ (ಚ) 19 ತನ್ನಿಜದಿಂ (ಚ) 20 ಪ (ಚ) 21 ತೋಱಿ (ಚ) 22 ತನ್ನೊಳು (ಚ) 23 ವಿಲ್ಲದಿಲ್ಲಂ (ಗ); ಮಲ್ಲದಿಲ್ಲಿಂ (ಚ) ಸ್ವೀ. ಪಾ (ಕ) 24 ವಂ (ಚ) † ಪುಟ ೩೪, ೩೫ ರ ಅಡಿಗೆಱೆಟನ ಪದ್ಯಗಳನ್ನು ನೋಡಿ.

೮೦ ತೆರೆ, ನೊರೆ, ಏರು, ಗುಳ್ಳೆ, ತುಂತುರು ಎಂಬಿವು ತುಂಬಿ ನಿಂತ ಸಾಗರದೊಳಗೆ ಆಗಲೇ ಉಕ್ಕಿ ಆಗಲೇ ಅಳಿದರೂ ಆ ಸಾಗರಕ್ಕೆ ಅವುಗಳಿಂದ ಆದ ಪ್ಪಾದರೂ ಏನು? ಪರೀಕ್ಷಿಸಿ ನೋಡಿದರೆ ಅವಿಕಾರವೂ, ಪರಿಪೂರ್ಣವೂ ಮತ್ತು ಸದ್ರೂಪವೂ ಆದ ಚಿನ್ಮಯಾತ್ಮನಲ್ಲಿ ಜಗತ್ತು ಒಮ್ಮೆ ಒಂದುಗೂಡುವುದು, ಮತ್ತೊಮ್ಮೆ ಅದನ್ನು ಬಿಟ್ಟು ತೊಲಗುವುದು.

೮೧ ದಶವಾಯುಗಳನ್ನು ಬಂಧಿಸುತ್ತ, ನವದ್ವಾರಗಳನ್ನು ಆವರಿಸುತ್ತ, ಅಷ್ಟಮದಗಳನ್ನು ಅದುಮುತ್ತ, ಸಪ್ತವ್ಯಸನಗಳನ್ನು ನುಚ್ಚುನೂರು ಮಾಡುತ್ತ ಅರಿಷಡ್ವರ್ಗಗಳನ್ನು ಅಟ್ಟುತ್ತ, ಪಂಚೇಂದ್ರಿಯಗಳನ್ನು ಅಡಗಿಸುತ್ತ, ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಕರಣಚತುಷ್ಟಯವನ್ನು ವಶಪಡಿಸಿಕೊಂಡು, ಇಷ್ಟ, ಪ್ರಾಣ, ಭಾವಲಿಂಗಗಳ ಅನುಸಂಧಾನಮಾಡುತ್ತ ಶಿವ–ಆತ್ಮರು ಬೇರೆಯೆಂಬ ದ್ವೈತ ಭಾವವನ್ನು ಬಡಿದೋಡಿಸುತ್ತ, ತಾನು, ಶಿವ ಎಂಬೆರಡಿಲ್ಲ, ಒಂದೇ ಎಂದು ತಿಳಿದಾತನೆ ಗುರುಮೂರ್ತಿಶಂಕರನು.

೮೨ ದೇಹವನ್ನು ಇಂದ್ರಿಯಗಳ ಸಮೂಹವು ಬೇರೆ ಬೇರೆ ಬಗೆಯಾಗಿ ಆಡಿಸುತ್ತಿವೆ. ಆ ದೇಹವನ್ನೂ, ಇಂದ್ರಿಯಗಳ ಗುಂಪನ್ನೂ ಮನಸ್ಸು ಆಡಿಸುತ್ತಿದೆ. ದೇಹ, ಇಂದ್ರಿಯ, ಮನಸ್ಸು ಅವುಗಳೆಲ್ಲವನ್ನೂ ಆತ್ಮನು ಆಡಿಸುವನು. ಮೋಹ ವನ್ನೊಮ್ಮೆ ಬಿಟ್ಟು ಅರಿತರೆ ಆತನೆ ಗುರುಮೂರ್ತಿಶಂಕರನು.

---

† ಪದ್ಯ ೭೯ ರಿಂದ ಮುಂದುವರಿದಿರುವ 'ಚ' ಪ್ರತಿಯ ಪದ್ಯಗಳಿವು :—

ಸ್ಥೂಲಶರೀರ ಸೂಕ್ಷ್ಮತನು ಕಾರಣದೇಹವೆನಿಪ್ಪವಕ್ಕೆ ತಾಂ
ಮೇಲಣ ಸಾಕ್ಷಿಯಾಗಿವಱೊಳೊಂದಿಯುಮೊಂದದೆ ನಿರ್ವಿಕಾರನಿ ।
ಶ್ಶೀಲ ನಿರೀಹ ನಿಷ್ಕ್ರಿಯ ನಿರಂಜನ ನಿರ್ಮಳ ಚಿತ್ತರೂಪನಂ
ಕಾಲನ ಕೋಲ್ಗೆ ಸಿಲ್ಕಿ ಮಱೆದಿರ್ದೆನಿದೇಂ ಗುರುಮೂರ್ತಿಶಂಕರಾ ॥ ೯೨ ॥

ಏಱಿದ ಭಂಡಿಯಂ ಪರಿಯಬಿಟ್ಟರ ದಿಟ್ಟ[1]ಗೆ ಪಾರ್ಶ[1]ಪರ್ವತಂ
[2]ಪಾಱುವ[2]ದೆಂಬಿನಂ ಪೊಳೆವ ಚಂದದಿ ಚಿತ್ತವನತ್ತಲಿತ್ತ[3]ಲುಂ ।
ಸೂಱೆ[3]ಬಿಡುತ್ತಲಿಪ್ಪವರ ನೋಟಕೆ ನಿನ್ನಯ ತತ್ವವನ್ಯಥಾ
ತೋಱುಗೆ ಬಲ್ಲೆನಾನದಱ ಬೇರ್ಮೊದಲಂ ಗುರುಮೂರ್ತಿಶಂಕರಾ ॥ ೯೩ ॥

ಸೂತನ ಸೂನುವೆಂದಱಿದ ಕರ್ಣನೊಳಿರ್ದುದದೆಂತು ಮುಂದೆ ಕೊಂ
ತೀತನುಜಪ್ರತೀತಿ ನರನಾನೆನುತಂ ಬಗೆದಿರ್ದರಾಮನೊಳ್ ।
ಪ್ರೀತಿಯನಾಂತುದೆಂತು ಹರಿ ತಾನೆನುತೆಚ್ಚಱು ನೋಡೆ [4]ಜೀವ[4]ನೆಂ
ದೇ ತಿಳಿದೆನ್ನೊಳೆಂತೊಗೆದುದಾತ್ಮಪದಂ ಗುರುಮೂರ್ತಿಶಂಕರಾ ॥ ೯೪ ॥

ಸ್ವೀಕೃತ ಪಾಠ :— ಮೂಡಬಿದಿರೆ [ಮೂ] ಪ್ರತಿಯದು ; 1 'ಗ ಪಾಸ್ಯ' [ಚ] 2 ತೋಱುವ; 3 ಮಾಱು [ಮೂ] 4 ದೇವ [ಚ]

ತೆರೆನೊರೆಯುಬ್ಬು ಬೊಬ್ಬುಳಿಕೆ ತುಂತುಱಿನಿಪ್ಪವು ತುಂಬಿ ನಿಂದ ಸಾ
ಗರದೊ[1]ಳಗಾಗಳುಕ್ಕಿದಡ[1]ಮಾಗಳೆ [2]ಪೋದಡಮ[2]ಬ್ಧಿ ಗಾದುದೇಂ ।
ಪರಿಕಿಸೆ ನಿರ್ವಿಕಾರ ಪರಿಪೂರ್ಣ ಸದಾತ್ಮ[3]ಕ[3] ಚಿನ್ಮಯಾತ್ಮನೊಳ್
ನೆರೆದಪುದೊಮ್ಮೆ ನೀಗಿದಪುದೊಮ್ಮೆ ಜಗಂ ಗುರುಮೂರ್ತಿಶಂಕರಾ ॥ ॥ ೮೦ ॥

ತಡಹುತ ಹತ್ತನಾವರಿಸುತೊಂ[4]ತನೌಂ[4]ಕುತ [5]ಮೆಂಟನೊಯ್ಯನೊ
ರ್ಗುಡಿ[5]ಸುತ[6]ಮೇ[6]ಳನೋಡಿಸುತ [7]ಮಾ[7]ಱನಡಂಗಿಸುತ್ತೈದನೋಜೆಯಿಂ ।
ಪಿಡಿವುತ ನಾಲ್ಕ[8]ನೀಕ್ಷಿಸುತ[8] ಮೂಱನಿಡುತ್ತೆರಡಂ ಬಳಿಕ್ಕ ಬೇ
ರ್ಪಡಿಸುತ[9]ಲೊಂದ[9]ನಿಂತು ತಿಳಿದಾತನೆ ನೀಂ ಗುರುಮೂರ್ತಿಶಂಕರಾ ॥ * ॥ ೮೧ ॥

ದೇಹಮನಿಂದ್ರಿಯಪ್ರಕಾರವಾಡಿಸು[10]ತಿರ್ಪವು[10] ಬೇಱೆಬೇಱೆಯಾ
ದೇಹಮನಿಂದ್ರಿಯಪ್ರಕರಮಂ ಮನವಾಡಿಸುತಿರ್ಪುದಂತುಟಾ ।
ದೇಹಮನಿಂದ್ರಿಯಪ್ರಕರಮಂ ಮನಮಂ ಸಲೆ ದೇಹಿಯಾಡಿಪಂ
ಮೋಹಮನೊಮ್ಮೆ ಬಿಟ್ಟಱಿದಡಾತನೆ ನೀಂ ಗುರುಮೂರ್ತಿಶಂಕರಾ ॥ § ॥ ೮೨ ॥

---

† ಅಱಿಯದ ಮೂಢನಾಚರಿಪ ಪುಣ್ಯದ ಪಾಪದ ಬಂಧ[11]ವಾತನಂ[11]
ಸೆಱೆವಿಡಿದನ್ಯಜನ್ಮಕೆಳೆದೊಯ್ಯದೆ ಮಾಣದು ತನ್ನನೊಮ್ಮೆ ತಾ ।
ನಱಿವ ತಟಸ್ಥನಂ ಸುಕೃತದುಷ್ಕೃತಸಂಚಯ [12]ಮುಟ್ಟಲಮ್ಮದೆಂ[12]
ಬಱಿಕೆಯನೇಕೆ ನೀಂ ಕೊಡದೆ ಕಾಡಿದೆ [13]ನೀಂ[13] ಗುರುಮೂರ್ತಿ
ಶಂಕರಾ ।೯೫।

* 'ಚ' ಪ್ರತಿಯ ಪದ್ಯಕ್ರಮದಲ್ಲಿ ಬರುವ ಮುಂದಿನ ಪದ್ಯವಿದು :

ಆತ್ಮನ ಮಾಯೆಯಾತ್ಮನನಡಂಗಿಸೆ ದೇಹವೆಯಾತ್ಮನೆಂದು ಜೀ
ವಾತ್ಮನೆಯಾತ್ಮನೆಂದು ಮಱಹಿಂಗಱಹಿಂಗೊಳಗಾಗಿ ನೋಳ್ಪಡಾ ।
ಆತ್ಮನೊಳಿಂತು ಧ್ಯಾನಿಸುತಲಾತ್ಮನೊಳೀಕ್ಷಿಸಿ ಕಂಡೆನೆಂಬ ಮೂ
ಢಾತ್ಮನೆ ನಿಂದು ನೋಡಿ ನಗೆ ಬಂದುದೆಲೇ ಗುರುಮೂರ್ತಿಶಂಕರಾ ।೯೦।

§ 'ಚ' ಪ್ರತಿಯ ಮುಂದಿನ ಪದ್ಯವನ್ನು ಪುಟ ೩೭ ರ ಅಡಿಗೀಟಿನಲ್ಲಿ ಕೊಟ್ಟಿದೆ.

1 ಳೆ ವಾಗಳುಣ್ಮಿದಡೆ (ಚ) 2 ಪೋದಡೆಮ (ಚ) 3 ನ (ಚ) 4 ತ್ತನೌ (ಗ) ತ್ತನೌಂ (ಚ)
5 ಲೆಂಟನೊಲ್ದು ಮೊಳ್ಳುಡಿ (ಚ) 6 ಲೇ (ಚ) 7 ಲಾ (ಚ) 8 ನೇಱಿಸುತ (ಚ) 9 ವಂದ (ಗ)
10 ತಿರ್ಪುದು (ಚ) 11 ವಾವನಂ (ಮೂ) 12 ವಂಟಲಣ್ಮದೆಂ (ಮೂ) 13 ಯ್ಯ (ಮೂ)

೮೩ ಎಲೇ ಜಗದ್ಗುರುವೆ, ಶತ್ರುಸೈನ್ಯದೆಡೆಗೆ ಹೋಗಲು ದಾರಿಗನಿಲ್ಲದೆ, ಸಮುದ್ರವನ್ನು ದಾಟಲು ನಾವಿಕನಿಲ್ಲದೆ, ಕತ್ತಲೆಯಲ್ಲಿ ಸಂಚರಿಸಲು ದೀಪವಿಲ್ಲದೆ, ಶರೀರವನ್ನು ಆತ್ಮನಲ್ಲಿ ಸಮರಸಗೊಳಿಸಲು ಗುರುಕಾರುಣ್ಯವಿಲ್ಲದೆ ಸಾಧ್ಯವೇ ?

೮೪ ಒತ್ತಡಹೋಗಿ ನಿದ್ರೆ ತಿಳಿದಂತೆ, ಬಲವಾದ ಬಂಧನ ಕಳಚಿದಂತೆ, ತಲೆಯ ಮೇಲಿದ್ದ ಭಾರ ಇಳಿದಂತೆ, ರೋಗ ಹರಿದುಹೋದಂತೆ, ಕತ್ತಲೆ ಜಾರಿ ಹೋದಂತೆ, ಹಿಡಿದ ಗ್ರಹ ತೊಲಗಿದಂತೆ, ಎಲೇ ಗುರುಮೂರ್ತಿಶಂಕರನೇ, ಇಹದ ಹಂಬಲವನ್ನು ಬಿಟ್ಟು ನಿಮ್ಮಕಡೆಗೆ ಮನಸ್ಸು ತಿರುಗಿ ನಾನು ಸುಖಿಯಾದೆ.

೮೫ ತನ್ನ ಬೃಹತ್ಪ್ರಮಾಣವನ್ನು ಬಿಟ್ಟು ಹೀಗೆ ಪ್ರಾಣಿಗಳಲ್ಲಿ ಒಂದು ಪರಿಮಿತ ಪ್ರಮಾಣಕ್ಕೆ ಸಿಕ್ಕಿದ ವಸ್ತುವೇ ಸೂರ್ಯ, ಚಂದ್ರ, ಅಗ್ನಿ ಇವುಗಳ ತೇಜಸ್ಸಿನಂತಿದೆ ಎಂದಮೇಲೆ ಪ್ರಕಟವಾದ ತೇಜಸ್ಸನ್ನುಳ್ಳ ಪರವಸ್ತುವೇ ಸತ್ಯವಲ್ಲದೆ ಬೇರೊಂದಲ್ಲ. ಆ ತೇಜಸ್ಸೆಲ್ಲವೂ ಒಂದೇಕಡೆ ಸೇರಿರುವುದಾದರೆ ಅಲ್ಲಿರುವ ವಸ್ತುವೆ ನಿಜವೆಂದು ನಿಮ್ಮ ರಹಸ್ಯವನ್ನರಿಯರಲ್ಲಾ !

೮೬ ಶಿವನು ಅಲ್ಲಿದ್ದಾನೆ, ಇಲ್ಲಿದ್ದಾನೆಯೆಂದು ಕಾಣಲು ಬಯಸಿ ಅಡ್ಡಾಡುವುದೇಕೆ? ಭಾವಿಸಬಲ್ಲರೆ ಬಳ್ಳದಲ್ಲಿ, ಮರಳಿನಲ್ಲಿ, ಸ್ತನದಲ್ಲಿ, ನಟ್ಟಕಲ್ಲಿನಲ್ಲಿ, ಹುತ್ತದಲ್ಲಿ, ಒಣಗಿದ ಕೊರಡಿನಲ್ಲಿ, ಬೇಡಿದುದನ್ನು ನೀಡಿದವರು ನೀನಲ್ಲದೆ ಬೇರೆ ಯಾರು?

೮೭ ಇಲ್ಲದ ಭೇದವನ್ನು ಸುಮ್ಮನೆ ಕಲ್ಪಿಸಿ ದುರ್ವಿಧಿಗೊಳಗಾಗಲೇಕೆ ? ನೀನಲ್ಲದ ವಸ್ತು ಎಳ್ಳಮೊನೆಯಷ್ಟು ಬೇರೆಯಿದೆಯೇ ? ಭಾವಿಸಿದರೆ ಕಲ್ಲಿನೊಳಗಿದ್ದು ಬೇಡಿದುದನ್ನು ನೀಡುವವನೇ ದೇವರೊಳಗಿದ್ದು ಕೊಟ್ಟರೆ ಆಗದೆ ? ಎಲ್ಲೆಲ್ಲಿಯೂ ಇದ್ದು ನೀಡುವವನು ನೀನೊಬ್ಬನೆ.

---

'ಚ' ಪ್ರತಿಯ ಮುಂದಿನ ಪದ್ಯವಿದು :—

ಕಡಿದ ಬಳಿಕ್ಕ ಭೂರುಹಮದೇಂ ಫಲಮಪ್ಪುದೆ ಯಾನೆ ಮೆಲ್ದು ಮೈ
ಗೆಡದವೊಲಿರ್ದೊಡಾ [1]ಬೆಳೆದ[1] ಪಣ್ಮೆಲಲಪ್ಪುದೆಯಿನ್ನು ಬೆಂದ [2]ಕ
ಪ್ಪಡಮಿರೆ ಮುನ್ನಿನಂತಿರ[3]ಲ[ದ]ಪ್ಪುದೆ ಯೋಗಿ[3] ಶರೀರಮಾತ್ರದೊ
[4]ಳ್ತೊಡರ್ದಿ*ೞ[4] ಮತ್ತೆ ಸಂಸೃತಿಗೆ ಸಲ್ವನೆ ಪೇಳ್ಗುರುಮೂರ್ತಿಶಂಕರಾ ||೮೮||

1 ಬೆಳ್ಳಲ (ಮೂ) 2+ ಪಿಂತೆ; 3 ಪ್ಪುದಯ್ಯೊ (ಮೂ) 4 ಸ್ವೀ. ಪಾಠ (ಮೂ) ಳ್ಕಡೆದಿರೆ (ಚ)

ಪರಕಟಕಕ್ಕೆ ಪೋಪಡೆ ಪೊಲಂಬಿಗನಿಲ್ಲದೆ ಸಿಂಧುವಂ ಸಮು
ತ್ತರಿಪಡೆ ಕರ್ಣ[1]ಧಾರಕನುಮಿಲ್ಲದೆ[1] ಕತ್ತಲೆಮೊತ್ತದಲ್ಲಿ ಸಂ।
ಚರಿಪಡೆ ದೀಪಮಿಲ್ಲದೆ [2]ಶರೀರಮನಾ[2]ತ್ಮನೊಳೊಂದುಗೈವೆ[3]ಡೇಂ[3]
ಗುರುಕೃಪೆಯಿಲ್ಲದಕ್ಕುಮೆ ಜಗದ್ಗುರುವೇ ಗುರುಮೂರ್ತಿಶಂಕರಾ ॥ ॥ ೮೩ ॥

ಒತ್ತರವೊತ್ತಿ ನಿದ್ರೆ ತಿಳಿದಂದದಿ ಬಲ್ಸೆಱೆ ನೀಗಿದಂದದಿಂ
ನೆತ್ತಿ[4]ಯೊಳಿ[4]ರ್ದ ಭಾರಮಿಳಿದಂದದಿ ಕುತ್ತಮಡಂಗಿದಂದದಿಂ।
ಕತ್ತಲೆ ಜಾಱಿದಂದದಿ ಗರಂ ಸರಿದಂದದಿ[5]ಯಿತ್ತ[5] ಬಿಟ್ಟು [6]ನಿ
ಮ್ಮತ್ತ[6] ಮನಂ ಮರಳ್ದು ಸುಖಿಯಾದೆನೆಲೇ ಗುರುಮೂರ್ತಿಶಂಕರಾ ॥ ॥ ೮೪ ॥

ಪವಣಳಿ[7]ದಿಂತು[7]ಸುರ್ವ[8]ರೊಳಗೊಂದು[8] ಪವಣ್ಗೊಳಗಾದ ವಸ್ತುವೇ
ರವಿ ಶಶಿ[9]ಯಗ್ನಿ[9] ತೇಜದವೊಲೆಂಬಡೆ ತೋರ್ಕೆಯ ತೇಜವುಳ್ಳ ವ।
ಸ್ತುವೆ ದಿಟವಲ್ಲದಿಲ್ಲದಿನಿತ್ತೈದುವಡೊಂದೆಡೆಯಲ್ಲಿ ನಿಂದ ವ
ಸ್ತುವೆ [10]ನಿಜವೆಂದು ನಿಮ್ಮೊಳಗುಗಾಣರಲ್ತೆ[10] ಗುರುಮೂರ್ತಿಶಂಕರಾ ॥ ॥ ೮೫ ॥

ಅಲ್ಲಿದನಿಲ್ಲಿದಂ ಶಿವನೆನುತ್ತೆಡೆಯಾಡಲದೇಕೆ ಭಾವಿಸ
ಲ್ಬಲ್ಲಡೆ ಬಳ್ಳದಲ್ಲಿ ಮುಳಲಲ್ಲಿ ಪಯೋಧರದಲ್ಲಿ ನಟ್ಟ ಕ।
ಲ್ಲಲ್ಲಿ ಪೊದಳ್ದ [11]ಪುತ್ತದೆಡೆ[11]ಯಲ್ಲಿ [12]ಕಳಲ್ದ[12] ಕೊರಂಟೆನಲ್ಲಿ ನೀ
ನಲ್ಲದೆ ಮತ್ತೆ ಬೇಡಿದುದ[13]ನಿತ್ತಪ[13]ರಾರ್ ಗುರುಮೂರ್ತಿಶಂಕರಾ ॥ ॥ ೮೬ ॥

ಇಲ್ಲದ ಭೇದಮುಂ ಬಱಿದೆ ಕಲ್ಪಿಸಿ ಮೂವಿಧಿಗಾಣ[14]ಲೇಕೆ[14] ನೀ–
[15]ನಲ್ಲದ[15] ವಸ್ತುವೆಳ್ಳನೊನೆಯಂತುಟದೇಂ ಪೆಱತುಂಟೆ ಭಾವಿಸಲ್।
ಕಲ್ಲೊಳಗಿರ್ದು ಕಾಮಿತವನೀವನೆ ದೇವರೊಳಿರ್ದು [16]ಕೊಟ್ಟಡೇಂ[16]
ಸಲ್ಲದೆ ಯೆಲ್ಲಿಯುಂ ಕೊಡುವನೋರ್ವನೆ ನೀಂ ಗುರುಮೂರ್ತಿಶಂಕರಾ ॥ ॥ ೮೭ ॥

---

1 ಧಾರುಬಳಿಕಿಲ್ಲದೆ (ಗ) 2 ಶರೀರಿ ಪರಾ (ಚ) 3 ಡಂ (ಚ) 4 ಯಲಿ (ಚ) 5 ಮಿನಿತ್ತು (ಗ) 6 ನಾಂ ಮತ್ತೆ (ಗ) 7 ದೆಂತುಟೆಂದು (ಚ) 8 ರದೊಂದು (ಚ) 9 ವಹ್ನಿ (ಚ) 10 ಜಡ ರೆಂತು ನಿಮ್ಮನೊಡಗೂಡುವರ್ಕೈ (ಚ) 11 ಭುತ್ತಿನೆಡೆ (ಚ) 12 ಕರಳ್ಪ (ಗ) ಕಳಲ್ಪ (ಚ) 13 ನೀವವ (ಗ) 14 ಲವೇಕೆ (ಗ) 15 ನಲ್ಲವೆ (ಚ) 16 ಕೊಟ್ಟಡಂ (ಗ)

೮೮ ನಿನ್ನನ್ನು ಭಕ್ತರು ಕಲ್ಲಿನಿಂದ ಹೊಡೆದು, ಉಗುಳಿ ಎಂಜಲನ್ನಿಕ್ಕಿ, ಬೆನ್ನು ಹತ್ತಿ ಬಿಲ್ಲಿನಿಂದ ಹೊಡೆದು, ಕಡೆಯ ಬಾಗಿಲನ್ನು ಕಾದು ಕಾಡಿದರು. ಬಲಿಷ್ಠರಾದ ಅವರಿಗೆ ಅದು ಮಕ್ಕಳ ಮುದ್ದಾಟವೆನುತ್ತ ನೀನಲ್ಲದೆ ಪ್ರೀತಿಸಿ ಪಾಲಿಸಿದ ದೇವತೆಗಳಾರು ?

೮೯ ಕ್ಷೀರಸಾಗರವನ್ನು ದೇವದಾನವರು ಕೂಡಿ ಉತ್ಸಾಹ ಭರದಿಂದ ಕಡೆಯಲು ಹಾಲಾಹಲವು ಅಬ್ಬರಿಸುತ್ತ ಹುಟ್ಟಿ ಬೆಂಬಿಡದೆ ಓಡಿಸಿಕೊಂಡು ಹೋಗಿ ದೇವತೆಗಳನ್ನು ಮುಟ್ಟಿ ಸುಡಲು, ನೀನದನ್ನು ಸೆಳೆದು ಕಂಠದಲ್ಲಿ ತಾಳದೆಹೋಗಿದ್ದರೆ, ಆ ದಿವಸ ದೇವಸತಿಯರು ಮಂಗಳಸೂಚಕವಾದ ಬಳೆಗಳನ್ನು ತೊಡುವಂತಿತ್ತೆ ? ಮತ್ತೆ ಸೋರ್ಮುಡಿಯಲ್ಲಿ ದಿಟವಾಗಿ ಹೂಗಳನ್ನು ಮುಡಿಯುವಂತಿತ್ತೆ ?

೯೦ ಯಮನು ಬಹುವೇಗವಾಗಿ ಅಟ್ಟಿಸಿಕೊಂಡು ಬರಲು ಮೃಕಂಡುವಿನ ಮಗನಾದ ಮಾರ್ಕಂಡೇಯನು ಕುಡು ಭಯಪಟ್ಟು ಮಾರ್ಗಮಧ್ಯದಲ್ಲಿದ್ದ ಶಿವಾಲಯವನ್ನು ಹೊಕ್ಕು ಶಿವಲಿಂಗವನ್ನು ನೋಡಿ, ಎಲೆದೇವ, ಕಾಪಾಡು ಎಂದು ಮೊರೆಯಿಡಲು ಯಮನನ್ನು ಶಿಕ್ಷಿಸಿ ಆ ಮಾರ್ಕಂಡೇಯನನ್ನು ಬಿಡದೆ ರಕ್ಷಿಸಿ ಎಲೆ ಗುರುಮೂರ್ತಿಶಂಕರನೇ ಆ ಮುನಿಗೆ ನಿಷ್ಠೆಯನ್ನು ನೀಡಿದೆಯಲ್ಲವೆ ?

೯೧ ನಿನ್ನ ನಿಜಸ್ವರೂಪದ ಲೀಲೆಯು ಒರೆಹಚ್ಚಿ ಒರೆಹಚ್ಚಿ ಎಷ್ಟೆಷ್ಟು ಪರೀಕ್ಷಿಸಿ ನೋಡಿದರೂ ಅಷ್ಟಷ್ಟೂ ಆಶ್ಚರ್ಯಕರವಾದುದು. ನೀನು ಕುಪಿತನಾದರೆ, ದಕ್ಷಯಾಗದ ಗತಿಯನ್ನೊಮ್ಮೆ ವಿವರಿಸಿದ್ದಾದರೆ ಬ್ರಹ್ಮ, ವಿಷ್ಣು, ದೇವೇಂದ್ರ, ಸೂರ್ಯಾಗ್ನಿಗಳ ಮುಖವು ಕಳೆಗುಂದುವುದು. ಅದನ್ನು ಬಾಯಿಬಿಟ್ಟು ಆಡುವುದರಿಂದ ಪ್ರಯೋಜನವೇನು ?

೯೨ ಕಾಲಿಡಲು ಆಕಾಶವು ತನಗೆ ಸಾಲದು ಎನಿಸುವಷ್ಟು ವಿಸ್ತಾರವೂ, ಮಹಾಭಯಂಕರವೂ ಆದ ಬಾಣವನ್ನು ತುದಿಬೆರಳಿನಿಂದ ನೀನು ತೂಗಿದೆ. ಹದಿನಾಲ್ಕು ಲೋಕಗಳನ್ನುಳ್ಳ ಪಿನಾಕಧನುವನ್ನು ಎಡಗೈಯ್ಯೊಳಗೆ ಹುದುಗಿಸಿದೆ. ನಿನ್ನ ಈ ಮಹತ್ತ್ವವನ್ನು ಕಂಡೂ ಬೇರೆಯವರ ಹಿರಿಮೆಯನ್ನು ಹೇಸದೆ ಹೆಸರಿಸುವೆನೆ ?

ಕಲ್ಲಲಿಡು[1]ತ್ತ[1] ಮೇಲುಗುಳುತೆಂಜಲನಿಕ್ಕು[2]ತ[2] ಬೆನ್ನ[3]ನೇಱುತಂ[3]
ಬಿಲ್ಲೊ[4]ಳ[4] ಪೊಯ್ವುತಂ ಕಡೆಯ ಬಾಗಿಲ ಕಾಪುಗೊಡು[5]ತ್ತ[5] ಕಾಡಿದರ್ ।
ಬಲ್ಲಿದರಾದ ಭಕ್ತರಿಗೆ ಮೋಹದ ಮಕ್ಕಳ ಮುದ್ದೆನು[6]ತ್ತ[6] ನೀ
ನಲ್ಲಪೆ [7]ಕೂರ್ತು ಪಾಲಿಸಿದ ಬೋಳೆಯರಾರ್[7] ಗುರುಮೂರ್ತಿಶಂಕರಾ ॥ ೮೮ ॥

ಕಡೆಯೆ ಕಡಂಗಿ ಕೂಡೆ ಕಡುಪಿಂ ಕಡಲಂ ವಿಷ[8]ವಾಲ್ದು[8] ಪುಟ್ಟೆ ಬೆಂ
ಬಿಡದಱಿಯಟ್ಟೆ ಮುಟ್ಟೆ ಸುರರಂ ಸುಡೆ ನೀನದ[9]ನೀಳ್ದು[9] ಕಂಠದೊ ।
[10]ಳ್ತ್ತಡೆ[10]ಯದೊಡಂದು ದೇವಸತಿಯರ್ [11]ಬಿಡಹಂ[11]ತೊಡಲುಂಟೆ ಮತ್ತೆ ಸೋ
ರ್ಮುಡಿಯೊಳ[12]ಲರ್ಗಳಂ[12] ಮುಡಿಯಲುಂಟೆ ದಿಟಂ ಗುರುಮೂರ್ತಿಶಂಕರಾ॥ ॥ ೮೯ ॥

ಅಟ್ಟೆಬರಲ್ಕವಂ [13]ಜವದೆ[13] ಕಂಡು ಮೃಕಂಡುತನೂಭವಂ ಭಯಂ
[14]ಬಟ್ಟೆಡೆವಟ್ಟೆ[14]ಯಲ್ಲಿ ಶಿವಮಂದಿರಕಂದಿರದೋಡಿ ನೋಡಿ ಬಾ
ಯ್ವಿಟ್ಟೆಲೆ ದೇವ ರಕ್ಷಿಸೆನೆ ಶಿಕ್ಷಿಸಿ ಕಾಲನನಾವಕಾಲಮುಂ
[15]ನಿಟ್ಟಿಸಿ[15] ನಿಷ್ಠೆಯಂ ಮುನಿಗೆ ಕೊಟ್ಟೆ[16]ಯಲ್ತೆ[16] ಗುರುಮೂರ್ತಿಶಂಕರಾ ॥ ॥ ೯೦ ॥

ಒರೆದೊರೆದೆಂತುಟೆಂತುಟು ವಿಚಾರಿಸಿ ನೋಡಿದ[17]ಡಂತುಟಂತುಟ[17]
ಚ್ಚರಿ ನಿಜಲೀಲೆ ನೀಂ ಮುಳಿಯೆ ದಕ್ಷನ ಯಜ್ಞದ ಪಾಂಗನೊಮ್ಮೆ ಬಿ
ತ್ತರಿಸೆ ವಿರಿಂಚಿ ವಿಷ್ಣು ವಿಬುಧೇಂದ್ರ ವಿಭಾವಸು ವೀತಿಹೋತ್ರ ಮು
ಖ್ಯರ ಮುಖನಂದು ಕಂದಿದಪುದಾಡಲದೇಂ ಗುರುಮೂರ್ತಿಶಂಕರಾ ॥ ॥ ೯೧ ॥

ಪದವಿಡಲಂಬರಂ ತನಗೆ ಸಾಲದೆನಿಪ್ಪ ಮಹೋಗ್ರಬಾಣಮಂ
ತುದಿವೆರಳಿಂದೆ ತೂಗಿದೆ ಚತುರ್ದಶ ಲೋಕಮನಾಂತ ಚಾಪಮಂ ।
ಪುದಿದೆಡಗೈಯ್ಯೊಳೊಂದಿಸಿದೆ ನಿನ್ನ ಮಹತ್ತ್ವದ ಮುಂದೆ [18]ಮತ್ತೆ[18] ಪೇ
ಸದೆ ಪೆಸರ್ಗೊ*ಂಬೆನೇ [19]ಪೆಱರ[19] ಪೆರ್ಮೆಯನಾಂ ಗುರುಮೂರ್ತಿಶಂಕರಾ॥ ॥೯೨॥

---

1 5, 6, ತ್ತ (ಗ) 2 ತೆ (ಗ) 3 ನೆರಂಗುತಂ (ಗ) 4 ಳು (ಗ) 7 ಮತ್ತೆ ಬೇಡಿದುದನೀವ ರಾರ್ (ಗ) 8 ವಾರ್ಧಿ (ಚ) 9 ನೀಳ್ದು (ಗ) 10 ಳೊತ್ತಡೆ (ಚ) 11 ತೊಡವಂ (ಚ) 12 ರಲ್ಗಳಂ (ಚ) 13 ಭಯದೆ (ಗ) 14 ಬಟ್ಟಡೆ ಬಟ್ಟೆ (ಗ) 15 ನಿಟ್ಟಿಸೆ (ಗ) 16 ಯಲಾ (ಚ) 17 ಡೆಂತುಟ (ಗ) 18 ಪೇಳು (ಚ) 19 ಪರರ (ಗ)·

೯೩ ನಿನ್ನನ್ನು 'ಮನ್ಮಥನ ಮೃತ್ಯು' ಎನ್ನೋಣವೆಂದರೆ ಮೃಡಾಣಿಗೆ ಶರೀರದ ವಾಮಾರ್ಧವನ್ನೇ ಕೊಟ್ಟು 'ಅರ್ಧನಾರೀಶ್ವರ' ನಾಗಿದ್ದೀಯೆ ಎಂಬ ನುಡಿಯಿದೆ. ಲೋಕಪಾಲಕನೆಂದು ಹೇಳೋಣವೆಂದರೆ ಈತ ಭಿಕ್ಷುಕ ಎಂಬ ಮಾತು ಬೇರೆ ಇದೆ. ದೇವತೆಗಳ ಒಡೆಯನೆಂದು ಹೇಳೋಣವೆಂದರೆ ಮರುಳುಗಳ ಸ್ವಾಮಿ ಎಂಬ ಸೊಲ್ಲಿದೆ. ಎಲೆ ಗುರುಮೂರ್ತಿಶಂಕರನೆ, ನಿನ್ನ ನಿಜಸ್ವರೂಪ ನಿಗಮಗೋಚರವೆ ?

೯೪ ವೇಷಹಾಕಿಕೊಂಡು ದೇಶವನ್ನೆಲ್ಲ ಅಲೆದು ಪರರ ಅನ್ನದ ಹಂಗಿನಲ್ಲಿ ಬದುಕಿ ಕಂಡಕಂಡವರನ್ನು ಹೇಸದೆ ಬೇಡಿದರೆ ನೋಡಿದವರು ನಗುವರು. ಹಾಗೆ ಅವರು ನಗಲು ಮುಖಭಂಗದಿಂದ ಕಳೆಗುಂದಿ ಬದುಕಿರಬೇಕೆಂಬ ಒಂದೇ ಒಂದು ಆಸೆಯ ಪಾಶದಲ್ಲಿ ನನ್ನನ್ನು ಉರುಳಿಸಿ ಅಲ್ಪನನ್ನಾಗಿ ಮಾಡಿದರೆ ಎಲೆ ತಂದೆಯೆ, ನಿನಗೆ ಬಂದ ಸಂಪತ್ತಾದರೂ ಏನು ? ಮೇಲಾಗಿ ನಿನಗೆ ದುಸ್ಸಾಧ್ಯವಾದುದು ತಾನೆ ಯಾವುದು ?

೯೫ ಸಹಜ (ಹುಟ್ಟು) ಗುಣ ಸಹಸ್ರಗುಣಗಳಿಗಿಂತ ಪ್ರಬಲವಾದುದು. ಇದೇಕೆಂದು ಮಾತ್ರ ತಿಳಿಯದು. ನನ್ನ ಮನ್ನಸ್ಸು, ಹೇಗಿತ್ತೊ ಹಾಗೆಯೇ ಇದ್ದು, ಸಮಸ್ತದೇವತೆಗಳ ಸಮೂಹದಲ್ಲಿ ಒಬ್ಬರೂ ನಿನಗೆಣೆಯಾದವರು ಇಲ್ಲವೇ ಇಲ್ಲವೆಂಬುದಾಗಿ ತಿಳಿದೂ ನಿನ್ನತ್ತ ಎದ್ದು ಮಣಿಯಲಿಚ್ಛಿಸದೆ ಇದೆ.

೯೬ ಶ್ವೇತರಾಜನು ಪರಸ್ತ್ರೀಸಂಗಕ್ಕಾಗಿ ಹೋಗುತ್ತ ಕೈಯಿಂದ ಜಾರಿಬಿದ್ದ ಹೂವನ್ನು ಮಹೇಶ್ವರನಿಗೆ ಆತುರದಿಂದ ಅರ್ಪಿಸಿದರೂ ಆತನಿಗೆ ಕೈಲಾಸಪದವಿ ದೊರಕಿತಂತೆ. ಮಿಕ್ಕ ಸಂಗತಿಯೇಕೆ ? ಈಶ್ವರನನ್ನು ಪೂಜಿಸಿದರೆ ಆತನಿಗೆ ರುದ್ರಮೂರ್ತಿ ಎಂಬ ಕೀರ್ತಿ ಲಭಿಸುತ್ತದೆ. ಕೈಯ ಉಂಗುರಕ್ಕೆ ಕನ್ನಡಿಯೆ ?

೯೭ ಮೈತುಂಬ ಭಸ್ಮಲೇಪನ ಮಾಡಿದರೇನು, ತನ್ನಲ್ಲಿ ಆತ್ಮವಿಶ್ವಾಸವೊಂದಿಲ್ಲದ ತನಕ ? ಎದೆಯಲ್ಲಿ ಲಿಂಗವನ್ನು ಧರಿಸಿದರೇನು, ವಾಸನಾತ್ರಯ ಅಡಗದತನಕ ? ಇಂತಹವನನ್ನು ಭಕ್ತನೆಂದೆನ್ನುವ ನರರಿಗೆ, ಎಲೆ ಗುರುಮೂರ್ತಿಶಂಕರನೇ, ನಿಮ್ಮ ಕೈಲಾಸದ ನಿವಾಸ ಹೇಗೆತಾನೆ ದೊರಕುವುದು ?

ಮದನನ ಮೃತ್ಯುವೆಂಬಡೆ ಮೃಡಾಣಿಗೆ ಮೆಯ್ಯರೆ[1]ಯಿತ್ತ[1]ನೆಂಬ ಮಾ
ತಿದೆ ಭುವನಂಗಳಂ ಪೊರೆವನೆಂಬಡೆ ಭಿಕ್ಷುಕನೀತನೆಂಬ ವಾ।
ಕ್ಕಿದೆ ಸುರ[2]ರಾಳ್ದ[2]ನೆಂಬಡೆ ಸಮಸ್ತ ಮರುಳ್ಗಳ ಸ್ವಾಮಿಯೆಂಬ ಸೊ
ಲ್ಲಿದೆ ನಿಗಮಕ್ಕೆ ಗೋಚರವೆ ನಿಮ್ಮ ನಿಜಂ ಗುರುಮೂರ್ತಿಶಂಕರಾ ॥ ॥ ೯೩ ॥

ವೇಷವ ತಾಳ್ದು ದೇಶವ ತೊಳಲ್ದು ಪರಾನ್ನದಿ ಬಾಳ್ದು ಕಂಡರಂ
ಹೇಸದೆ ಬೇಡಲಂತವರು ನೋಡಿ ನಗಲ್ ಮೊಗ ಬಾಡಿ ಜೀವಿಪೊಂ।
ದಾಸೆಯ ಪಾಶದೊಳ್ಸಿಡಪಿ ಯೆನ್ನ ಲಘುತ್ವವ ಮಾಡಿದಲ್ಲಿ ಬಂ
ದೈಸಿರಿಯೇನು ತಂದೆ ನಿನಗಿಂತಿದಿರೇಂ ಗುರುಮೂರ್ತಿಶಂಕರಾ ॥ * ॥ ೯೪ ॥

ಒಂದು ಗುಣಂ ಸಹಸ್ರ ಗುಣದಿಂ ಮಿಗಿಲಾದುದು [3]ಸಾಜ[3]ಮಾಗಿದೇ
ನೆಂದಱಿಯೆಂ [4]ಮದೀಯ[4] ಮನ[5]ವಿರ್ದ[5]ವೊಲಿರ್ದು ಸಮಸ್ತದೇವತಾ।
ವೃಂದದೊಳೋರ್ವ[6]ರುಂ[6] ನಿನಗೆ ಪಾಸಟಿಯಾದವರಿಲ್ಲವಿಲ್ಲವಿ
ಲ್ಲೆಂದ[7]ಱಿದ[7]ತ್ತಲೆದ್ದೆ ಜಗಲೊಲ್[8]ದಿಶೇ[8] ಗುರುಮೂರ್ತಿಶಂಕರಾ ॥ ॥ ೯೫ ॥

ಶ್ವೇತನೃಪಂ ಪರಾಂಗನೆಗೆ ಪೋಗುತ ಬಿದ್ದರಳಂ ಮಹೇಶ್ವರಂ
ಗಾತುರದಿಂದಲರ್ಪಿಸಿದಡಾತಗೆ ಸಂಪದವಾಯಿತಂತೆ ಮ।
ತ್ತೇತರ ಮಾತು ಯೀಶ್ವರನನರ್ಚಿಸಿದಡಾತನೆ ರುದ್ರಮೂರ್ತಿ ವಿ
ಖ್ಯಾತಿ[9]ಯು[9] ಕೈಯ [10]ಮುದ್ರಿಕೆಗೆ ದರ್ಪಣವೇ[10] ಗುರುಮೂರ್ತಿಶಂಕರಾ॥* ॥೯೬॥

ಪೂಸಿದಡೇನು ಭಸ್ಮವ ಶರೀರದೊಳೆಲ್ಲಮು ತನ್ನೊಳಾತ್ಮವಿ
ಶ್ವಾಸಮದಿಲ್ಲದನ್ನಬರ ಕಟ್ಟಿದೊಡೇನುರದಲ್ಲಿ ಲಿಂಗಮಂ।
ವಾಸನೆ[11]ಯಾಳದ[11]ನ್ನಬರ ಭಕ್ತ[12]ನಿವೆಂಬ[12] ನರರ್ಗೆ ನಿಮ್ಮ ಕೈ
ಲಾಸನಿವಾಸವೆಂತು ದೊರಕೊಂಬುದೊ ಪೇಳ್ಗುರುಮೂರ್ತಿಶಂಕರಾ ॥ * ॥ ೯೭ ॥

---

1 ವೆತ್ತ (ಚ) 2 ರಾಳ್ವ (ಗ), (* 'ಚ' ಪ್ರತಿಯಲ್ಲಿ ಈ ವೃತ್ತಗಳಿಲ್ಲ) 3 ಸಹಜ (ಗ, ಚ) 4 ನುಡಿಯು; 5 ಕಿರ್ದ (ಚ) 6 ರಾ (ಚ) 7 ವರ (ಚ) 8 ರಲ್ಕೆ (ಚ) 9 ಯೆ (ಗ) 10 ಕಂಕಣಕೆ ಕನ್ನಡಿಯೆ (ಕ) 11 ಯೋಳಿದ (ಗ); ಪೋಗವ (ಕ) 12 ನೀನೆಂಬ (ಕ).

೯೮ ತೆರೆ, ಹೊರೆ, ಸುಂಕಸೋದಿಗೆಗಳ ಕಟ್ಟಳೆಗಳಿಂದ ಮಾನ್ಯರಾದ ಮಾನವರುಂಟು. ಆದರೆ ಸಾವಿನ ಕಟ್ಟಳೆಯಿಂದ ಮಾನ್ಯರಾದ ಮನುಷ್ಯರನ್ನು ನಾವು ಕಂಡರಿಯೆವು. ಎಲೇ ಜೀವನೆ, ಈ ಲೋಕದಲ್ಲೆಲ್ಲೂ ಈ ಸಂಗತಿಯನ್ನು ನೀನೂ ಕೇಳಿಯೂ ಇಲ್ಲ. ಆ ಕಾರಣ ಸರ್ವದಾ ಶಿವನ ಪೂಜೆಯನ್ನು ಮಾಡು. ಮಾಡದಿದ್ದರೆ ಭವರೋಗ ಹರಿಯದು. ಇದು ಸತ್ಯ ಎಂದು ತಿಳಿ.

೯೯ ಸಾಯುವವರನ್ನು ಆಗಿಂದಾಗ್ಗೆ ಕಂಡು ಈ ಶರೀರವನ್ನು ಸ್ಥಿರವೆಂದೂ, ದಟ್ಟದಾರಿದ್ರ್ಯವೆಂಬ ಬೇಗೆಯಲ್ಲಿ ಬೇಯುವವರನ್ನು ನೋಡಿ ಐಶ್ವರ್ಯ ಸ್ಥಿರವಾದುದೆಂದೂ, ಮುಪ್ಪಿನಲ್ಲಿ ನರಳುವವರನ್ನು ನೋಡಿಯೂ ತಾರುಣ್ಯವನ್ನು ದಿಟವೆಂದು ಎಲೇ ಗುರುಮೂರ್ತಿಶಂಕರನೆ, ಏಕೆ ಮೂಢರು ಭಾವಿಸುವರೆಂಬುದನ್ನು ವಿಚಾರಿಸು.

೧೦೦ ದೇವರು ಎಂದು ಹೇಳಿಸಿಕೊಂಡವರ ಗುಂಪಿನಲ್ಲಿ ಎಲ್ಲರನ್ನೂ ಆರಿಸಿ ನೋಡಿದರೆ ಮೂವರು ಮಾತ್ರ ಶಕ್ತರಾದವರು. ಮತ್ತೆ ಆ ಮೂವರಲ್ಲಿ ಮಹಿಮೆಯಿಂದ ಕೀರ್ತಿಗಳಿಸಿದವರು ಇಬ್ಬರೆ. ಆ ಇಬ್ಬರಲ್ಲಿ ಯಾರು ಮಹಿಮರೆಂದು ವಿಚಾರಮಾಡಿ ನೋಡಲು ಅವ್ಯಾಜವಾದ ಭಕ್ತಿ ನಿನ್ನನ್ನಾಶ್ರಯಿಸಿ ಬೇರೂರಿದೆ.

೧೦೧ ಈ ಬಗೆಯಿಂದ ಭಕ್ತಿ, ವಿರಕ್ತಿ, ಮುಕ್ತಿಗಳ ಬೀಜಕಾರಣವೆಂದು ಪ್ರಖ್ಯಾತಿಯನ್ನು ಹೊಂದಿದ ಈ ಶತಕ ಭಕ್ತರ, ವಿರಕ್ತರ, ಮುಕ್ತರ ಚಿತ್ತದಲ್ಲಿ ಪ್ರೀತಿಯನ್ನು ಸಂಪಾದಿಸಿದೆ; ಶಂಕರನ ಪಾದಗಳಿಗೆ ಸಮರ್ಪಣೆಮಾಡಿದ 'ಶಂಕರ' ಪದದ ಪಾದಮುದ್ರಿಕೆಯುಳ್ಳ ಈ ಶತಕಪ್ರಬಂಧವು ಚಂದ್ರಸೂರ್ಯರಿರುವತನಕ ಭೂಲೋಕವನ್ನೆಲ್ಲ ಆವರಿಸಿ ನೆಲೆಗೊಳಲಿ.

ಸಂಪಾದಕನ ವಚನ ಶಂಕರಶತಕ ಸಂಪೂರ್ಣ

ತೆಱಿ ಹೊಱಿ ಸುಂಕ ಸೋದಿಗೆ ನರರ್ಗಿವು ಮಾನ್ಯಗಳೈಸೆ ನಾವು ಕಂ
ಡಱಿಯೆವು ಸಾವುಮಾನ್ಯದ ಮನುಷ್ಯರನೀ ಜಗದಲ್ಲಿ ಕೇಳ್ದು ನೀ ।
ನಱಿಯೆ ಸದಾ ಶಿವಾರ್ಚನೆಯ ಮಾಡೆಲೆ [1]ಜೀವನೆ[1] ಮಾಡದಿರ್ದೊಡಂ
ಹಱಿಯದು ಜನ್ಮಜಾಡ್ಯವಿದು ಸತ್ಯಕಣಾ ಗುರುಮೂರ್ತಿಶಂಕರಾ ॥ * ॥ ೯೮ ॥

ಸಾವರ ಕಂಡು ಕಂಡು ತನುವಂ ಸ್ಥಿರವೆಂದು ದರಿದ್ರದೋಷದೊಳ್
ಜೀವರ ಕಂಡು ಕಂಡು ಸಿರಿಯಂ ನೆಲೆಯೆಂದು ಪೊದಳ್ದು ಮುಪ್ಪಿನೊಳ್ ।
ನೋವರ ಕಂಡು ಕಂಡು ಸಲೆ ಯೌವನಮಂ ದಿಟವೆಂದು ಗಾವಿಲರ್
ಭಾವಿಪರೇ[2]ಕೆ[2] ಕೇಳ್ ಭವಭಯಂಕರನೇ ಗುರುಮೂರ್ತಿಶಂಕರಾ ॥* ॥ ೯೯ ॥

ಪರಿಕಿ[3]ಸಿ[3] ದೇವರೆಂಬವರ ತಂಡದೊಳೆಲ್ಲರನಾಯ್ದು [4]ನೋಡೆ[4] ಮೂ
[5]ವರು[5] ಮಿಗಿಲಾದವರ್ ಬಳಿಕ ಮೂವರೊ[6]ಳೀಕ್ಷಿಸೆ ಮೈಮೆಯಿಂದಲೀ[6] ।
ರ್ವರೆ ಪೆಸರ್ವೆತ್ತವರ್ [7]ಬಳಿಕವಿರ್ವರೊಳಾರಯೆ ನಿನ್ನೊಳಾಂತು[7] ಜೀ
ರ್ವರಿದುಮ ಭಕ್ತಿ ಕಾರಣವ [8]ನಾನುಸುರೆಂ[8] ಗುರುಮೂರ್ತಿಶಂಕರಾ ॥ ॥ ೧೦೦ ॥

ಈ ತೆಱದಿಂದೆ ಭಕ್ತಿಯ ವಿರಕ್ತಿಯ ಮುಕ್ತಿಯ ಬಿತ್ತೆನಿಪ್ಪ ವಿ
ಖ್ಯಾತಿಯ[9]ನಾಂತ[9] ಭಕ್ತರ ವಿರಕ್ತರ ಮುಕ್ತರ ಚಿತ್ತದೊಳ್ಕರಂ ।
ಪ್ರೀತಿಯ[10]ನಾಂತ[10] [11]ಶಂಕರಪದಾಂಕಿತಮಿಾ[11] ಶತಕ ಪ್ರಬಂಧಮು
ರ್ವೀತಳದಲ್ಲಿ ಪರ್ವಿ ನೆಲಸಲ್ಕೆ ಸುಧಾಕರಸೂರ್ಯರಿರ್ಪಿನಂ ॥ ॥ ೧೦೧ ॥

† ಅಂತು ಶಂಕರ ಶತಕ ಸಂಪೂರ್ಣ

ಮಂಗಳ ಮಹಾಶ್ರೀ

---

1 ಜೀವನ [ಗ] * 'ಚ' ಪ್ರತಿಯಲ್ಲಿ ಈ ಪದ್ಯಗಳಿಲ್ಲ. 2 — [ಗ] 3 ಸೆ [ಚ] 4 ನೋಡಿ [ಚ] 5 ವರೆ [ಚ] 6 ಳಾರ ಮಹಿಮೆಯಿಂದಲಿ [ಚ] 7 ತಿಳಿಯಲಿವರ್ಬಳಿಕಯಿಂದಿರ್ವರೊಳೀಕ್ಷಿಸೆ ನಿನ್ನೊಳೋವೊ [ಚ] 8 ನಾನುಸುರ್ವೆಂ [ಗ ಚ] ನೇನುಸುರ್ವೆಲಿ [ಕ] 9 10 ನಾಂತು 11 ವಿಾಂತು ತನೆಯಿೂ [ಗ].

† ಈ ಸ್ವೀಕೃತಪಾಠ [ಕ] ಪ್ರತಿಯದು. 'ಗ' ಮತ್ತು 'ಚ' ಪ್ರತಿಗಳಲ್ಲಿರುವ ಪಾಠಾಂತರಗಳು ಕ್ರಮವಾಗಿ ಹೀಗಿವೆ:

"ಇತಿ ಶ್ರೀ ಚಂದ್ರಶೇಖರ ಮಹಾಕವೀಂದ್ರವಿರಚಿತಮಪ್ಪ
ಶಂಕರ ಶತಕ ವಿಪುಲಪ್ರಬಂಧಂ ಭಕ್ತಿ ವಿರಕ್ತಿ ಮುಕ್ತಿ ಸಾಕಲ್ಯವಿಸ್ತಾರಂ
ಭಕ್ತಿಲೋಕೋಽಯಂ ಯಃ ಪಠೇನ್ನಿರಂತರಂ ಮಂಗಳಂ ಪ್ರಾಪ್ನುಯಾ
ತ್ಸಾಕಲ್ಯಂ ಲಭತೇ ಮಂಗಳಮಹಾಶ್ರೀ" (ಗ);
"ಶಂಕ ರಶತಕ ಸಮಾಪ್ತಂ ಮಂಗಳಮಸ್ತು ಶ್ರೀ" (ಚ)

# ಪರಿಶಿಷ್ಟ

## No. 451†

1 ಶ್ರೀಗಣಾಧಿಪತಯೇ ನಮಃ ನಮ[ಸ್ತುಂಗ] ಶಿರಶ್ಚುಂಬಿ ಚಂದ್ರ....
2 ಕ್ಸನಗರಾರಂಭ [ಮೂ]ಲ [ಸ್ತಂ] ಭಾಯ ಶಂಭವೇ [।*] ಸ್ವಸ್ತಿ
—ಶ್ರೀ ಜಯಾಭ್ಯುದಯ........

. [೧] ೩೭ [೯] ನೆಯ

3 ವರ್ತಮಾನ [ಪ್ರ] ಭವಸಂವತ್ಸರ ವೈಶಾಖಶು ೧೫ ಲು ಶ್ರೀಮನ್ಮಹಾ
ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀ
4 ರಪ್ರತಾಪ ದೇವರಾಯ ಮಹಾರಾಯರ ನಿರೂಪದಿಂ ಬಾರಕೂರ
ರುಪ್ಪಂಣ ಒಡೆಯರು ಶ್ರೀಕೋಟಿನಾಥ—
5 ದೇವರಿಗೆ ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ ದೇವರಾಯ
ಮಹಾರಾಯರ ಹೆಸರ ಧರ್ಮವಾಗಿ ಭಂಡಾ—
6 ರದ ಗುರುರಾಯ ಒಡೆಯರು ಶ್ರೀಕೋಟಿನಾಥ ದೇವರಿಗೆ ದರುಶನಕೆ
ಬಂದಲ್ಲಿ ಮಾಡಿದ ಧರ್ಮದ ವಿವರ ತಿಂಗ—
7 ಳೊಂದಕ್ಕೆ ರಂಗಪೂಜೆ ಒಂದಕ್ಕಂ ಕೊಟ [ಗ] ೫ ಲೆಕ್ಕದಲು ತಿಂಗಳು
೧೨. ಕಂ ರಂಗಪೂಜೆ ೧೨ ಕಂ ಗ೬ಂಪ್ರ
8 ತಿವರುಷದಲೂ ಭಾದ್ರಪದ ಬ ೫ ತಿಥಿಯಲೂ ಮಾಡುವ ಮಹಾಪೂಜೆಗೆ
ಕಾ ಗ ೩೦ ನಿತ್ಯಾಸ್ಥಿತಿಯಲು ಗುರು—
9 ರಾಯ ಒಡೆಯರು ಮಾಡಿಸಿದ ಮಠದಲು ನಡೆವ ಛತ್ರ ಅಯಿದು
ಪರಿ ಶಾಕ ತೊಯೆ ತುಪ್ಪ ವಿಳೆಯಸಹಿತ ಅಟ್ಟುವ
10 ಬ್ರಾಹ್ಮಣ ೧ ಉಂಬ ಬ್ರಾಹ್ಮರ ಜನ ೧೦ ಕಾಟಿ ಗ ೧೦೦ ರಂಗಪೂಜೆ
ಮಹಾಪೂಜೆಗೆ ಪರಿಮಳದ ಹೂಮಾಲೆಗೆ....
11 ಅನ್ತು ಗ ೧೯೬॥ ಅಕ್ಷರದಲು ನೂಱತೊಂಭತ್ತ ಆಱೂವರೆ ಹೊಂನು
ಪ್ರಭವ ಸಂವತ್ಸರದ ವೈಶಾಖ ಶು ೧೫ ಪು (೦)—
12 ಣ್ಯಕಾಲದಲೂ ದೇವರಾಯ ಮಹಾರಾಯರ ಹೆಸರಲೂ ಕೋಟಿನಾಥ
ದೇವರ ಸಂನಿಧಿಯಲು ಧಾರೆಯ—
13 ನೆಱದರಾಗಿ ಯೀಧ (೦)ರ್ಮ್ಮಕೆ ಬಾರಕೂರನಾಳುವ ರುಪ್ಪಂಣ
ಒಡೆಯರು ವಿಂಗಡಿಸಿ ಕೊಟ್ಟ ಗ್ರಾಮ ಕರುವಕುಂ—

---

† S·I·I· Texts ix, part II

14 ದ ಗ್ರಾಮ ೧ . . ಕುಳ ಉಪಚಾರ ಸಹವಾಗಿ ಕಾಟಿ ಗ ೫ ೧ ಯೀ ಧರ್ಮಕ್ಕೆ ನರಲುಡು ಗ ೧೩.... ಅಲು
15 ಮದ್ರಿಕೆಯ.........ಯೆತ್ತಿ ಸಲಿಸುವ ಮನುಷ್ಯಗೆ ಗ ೧೨ ಉ ಭಂ ಗ ೨೦ಲ|| ಅಕ್ಷರದಲೂ
16 ಯಿಂನೂಜಿಯೆಂಟೂವನೆ ಹೊ (೦) ನ್ನನು ಬಾರಕೂರ ಚಾವಡಿಯ ವಹಿಗೆ ತೆಗೆಸಿ ಯಿೂ ಧರ್ಮಕೆ ಧಾರೆಯ—
17 ನೆಱದು ಆಚಂದ್ರಾರ್ಕ್ಕಸ್ಥಾಯಿಯಾಗಿ ಬಿಡು ದೇವಸ್ವವಾಗಿ ಸರ್ವ ಮಾನ್ಯವಾಗಿ ಕೊಟ್ಟೆವಾಗಿ ಸುಖದಿಂ
18 ಭೋಗಿಸೂದು ಯಿೂ ಧರ್ಮವನು ಯಿೂ ಸ್ತಾನದಲು ಕಾಲಾಟಿಗಳಾದ ಧಂನ್ಯರು ಕರುವಕುಂದ ಮೂವತ್ತು
19 ವ್ರಿತ್ತಿಕಾಱರ ಕೈಯಲು ಆ ಗ್ರಾಮದ ಕುಳ ಉಪಚಾರ ಹಾಲುಹಬ್ಬ ಏನುಳಂಥಾದನು ನಡಸಿ ಬ—
20 ಹದು ಯಿೂ ಧರ್ಮವ ತಪ್ಪದೆ ನಡಸಿಸಿ ಪಾಲಿಸಿ ಬಹರು ಯಿೂ ಸ್ಥಾನ ಮಾನ್ಯವನು ಏಕಸ್ವಾಮ್ಯದಲೂ ಪಾಲಿಸಿ
21 ಸರ್ವ್ವಮಾನ್ಯವಾಗಿ ನಡವಂಥ ಯಿೂ ಧರ್ಮಶಾಸನಕ್ಕೆ ಕರಣಿಕ ಲಿಂಗ ರಸ ವಿರೂಪಾಕ್ಷದೇವಗಳು ಒಡೆಯ [ರ] ಒಪ್ಪ
22 ............ಒಪ್ಪ ಶುಭಮಸ್ತು ಯಿೂ ಧರ್ಮಕ್ಕೆ ಆರೊಬ್ಬರು ಅಳುಪಿದವರು ಕೋಟಿ
23 ............ಕವಿಲೆಯ ವಧಿಸಿದ ಪಾಪಕ್ಕೆ ಹೋಹರು
24 ............ವಸುಂಧರಾಂ ಷಷ್ಟಿವರ್ಷ್ವರುಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ[ಃ*]ದಾನ [ಪಾಲ]–
25 ನಯೋರ್ಮಧ್ಯೆ [ದಾನಾಚ್ಛ್ರೇ] ಯೋನುಪಾಲನಂ [|*] ದಾನಾಸ್ವರ್ಗ ಮವಾಪ್ನೋತಿ ಪಾಲನಾದಚ್ಯುತಂ....†



# ಶಬ್ದಕೋಶ

## ಅ

| | ಪುಟ | ಪದ್ಯಸಂಖ್ಯೆ | |
|---|---|---|---|
| ಅಕ್ಕರ | ೨ | ೧೪ | ಅಕ್ಷರ, (ಸಂ) ಬರೆಹ |
| ಅಗಣಿತ | ೩೩ | ೩೬ | ಎಣಿಕೆಗೆ ಮೀರಿದ |
| ಅಗ್ಗ | ೩ | ೩ | ಶ್ರೇಷ್ಠ |
| ಅಗುಳ್ | ೭೨ | ೬೭ | ಅಗೆ, ತೋಡು |
| | ೩೩ | ೨೬ | |
| ಅಂಕುರಿಸು | ೫ | ೯ | ಮೊಳಕೆಯಾಗು, ಮೂಡು |
| ಅಂಗಣ | ೭೨ | ೬೧ | ಅಂಗಳ, ರಂಗ |
| ಅಂಘ್ರಿ | ೧೨ | ೩೬ | ಪಾದ |
| ಅಚರ | ೩೩ | ೨೬ | ಚಲಿಸದ, ಸ್ಥಿರ |
| ಅಚ್ಚರಿ | ೫ | ೬ | ಆಶ್ಚರ್ಯ |
| ಅಜಸ್ರ | ೭೯ | ೬೮ | ಸಂತತ, ನಿರಂತರ |
| ಅಜಿನ | ೧೫ | ೩೩ | ಚರ್ಮ |
| ಅಡಂಗು | ೩೨ | ೮೪ | ಮಾಯವಾಗು |
| ಅಡಸು | ೧೯ | ೪೩ | ಕವಿ, ಮುತ್ತು, ತುಂಬು |
| ಅಡ್ಡಣ | ೭೩ | ೫೫ | ಗುರಾಣಿ |
| ಅಂತುಟು | ೬೧ | ೪೮ | ಹಾಗೆ |
| ಅಂದಣ | ೭೩ | ೫೪ | ಪಲ್ಲಕ್ಕಿ |
| ಅದ್ರಿ | ೩ | ೪ | ಬೆಟ್ಟ |
| ಅನವರತ | ೩ | ೫ | ಸರ್ವದಾ, ಎಡೆಬಿಡದೆ |
| ಅನ್ನಬರ | ೪೧ | ೯೨ | ಆತನಕ |
| ಅನಾಸ್ಥೆ | ೬೩ | ೫೧ | ಅನಪೇಕ್ಷೆ |
| ಅನುಭಾವ | ೩೩ | ೨೮ | ಶಿವಜ್ಞಾನದಂತೆ ನಡೆಯುವುದು |
| ಅಪಥ್ಯ | ೩೧ | ೨೧ | ರೋಗವನ್ನು ಹೆಚ್ಚಿಸುವ ಆಹಾರ |
| ಅಬ್ಜ | ೩ | ೭ | ಕಮಲ |
| ಅಬ್ಜಜ | ೩ | ೭ | ಬ್ರಹ್ಮ |
| —ಅಂಡ | ೩ | ೭ | ಬ್ರಹ್ಮಾಂಡ |

| | | | |
|---|---|---|---|
| ಅಂಬರ | ೧೫ | ೩೩ | ವಸ್ತ್ರ ; ಆಕಾಶ |
| | ೩೯ | ೯೨ | |
| ಅಂಬು | ೧೧ | ೨೧ | ನೀರು |
| —ಜ | ೧೧ | ೨೧ | ಕಮಲ |
| —ರಾಶಿ | ೩ | ೩ | ಜಲಧಿ, ಸಮುದ್ರ |
| ಅಭಿಘಾತ | ೨೩ | ೫೫ | ಒರಗಿ ಬೀಳುವಿಕೆ |
| ಅಭಿಜ್ಞತೆ | ೩ | ೨ | ಪ್ರೌಢಿಮೆ |
| ಅಮನು | ೩೩ | ೭೫ | ಅಬ್ಬ ! |
| ಅಮರ | ೨೯ | ೬೮ | ದೇವತೆ |
| —ಈಶ್ವರ | ,, | ,, | ದೇವೇಂದ್ರ |
| ಅಮುರ್ಚು | ೨೭ | ೬೧ | ಹಿಡಿ |
| ಅರಲ | ೭ | ೧೧ | ಹೂವಿನ |
| ಅರೆ | ೨೫ | ೫೬ | ಅರ್ಧ |
| —ಕಾಣಿ | ೨೫ | ೫೬ | (ನಾಣ್ಯದ 1/೮೦ ಭಾಗವಾದ) ಕಾಣಿಯ ಅರ್ಧ |
| ಅಱಿಕೆ | ೩೧ | ೭೩ | ತಿಳಿವು ; ಜ್ಞಾನ |
| ಅಱಿವು | ೩೧ | ೭೩ | |
| ಅರ್ಕ | ೩೩ | ೭೭ | ಸೂರ್ಯ |
| ಅರ್ಣವ | ೧೫ | ೩೨ | ಸಮುದ್ರ |
| ಅರ್ಥ | ೨೫ | ೫೯ | ಧನ, ಹಣ |
| ಅರ್ಥಿ | ೧೧ | ೨೫ | ಬೇಡುವವನು ; ಯಾಚಕ |
| ಅಲರ್ | ೭ | ೧೧ | ಹೂ |
| ಅಲ್ಲಿದನ್ | ೩೭ | ೮೬ | ಅಲ್ಲಿದ್ದಾನೆ |
| ಅಸ್ಖಲಿತ | ೨೯ | ೬೮ | ಮುಗ್ಗರಿಸದ, ಅಚಂಚಲ |
| ಅಸ್ಥಿ | ೨೭ | ೬೨ | ಮೂಳೆ |
| ಅಸು | ೨೩ | ೫೪ | ಪ್ರಾಣ |
| ಅಸುರ | ೧೫ | ೩೪ | ರಾಕ್ಷಸ |
| ಅಹಿ | ೩೧ | ೭೪ | ಸರ್ಪ, ಹಾವು |
| ಅಳ್ತಿ | ೨೩ | ೫೧ | ಪ್ರೀತಿ |

## ಆ

| | | | |
|---|---|---|---|
| ಆಗಳಿಸು | ೧೩ | ೨೭ | ಆಕಳಿಕೆಯಾಗು, ಜೃಂಭಿಸು |
| ಆಗಾರ | ೨೧ | ೪೭ | ಮಂದಿರ ಮನೆ |

| | | | |
|---|---|---|---|
| ಆತ್ಮಭವ | ೧೯ | ೪೩ | ತನುಜ, ಮಗ |
| ಆಯು | ೨೫ | ೫೮ | ಜೀವಿತ ಕಾಲ, ಆಯುಸ್ಸು |
| ಆರಯ್ | ೪೩ | ೧೦೦ | ಆಲೋಚಿಸು, ವಿಚಾರಮಾಡು |
| ಆರ್ಪ್ | ೨೫ | ೬೦ | ಸಾಮರ್ಥ್ಯ ; ಸಮರ್ಥವಾಗು |
| ಆಲ್ | ೩೯ | ೮೯ | ಅಬ್ಬರಿಸು, ಆರ್ಭಟಿಸು |
| ಆಸಱು | ೨೩ | ೫೧ | ಆಲಸ್ಯ |
| ಆಸುರ | ೨೯ | ೬೭ | ಭಯಂಕರ |
| ಆಹ್ವಯ | ೧೫ | ೩೪ | ಹೆಸರುಳ್ಳ |
| ಆಳ್ | ೧೧ | ೨೨ | ಮುಳುಗು |
| ಆಳ್ತನ | ೧೭ | ೪೦ | ಪ್ರಭುತ್ವ, ಒಡೆತನ |
| ಆಳ್ದನ್ | ೪೧ | ೯೩ | ಪ್ರಭು, ಒಡೆಯ |

## ಇ

| | | | |
|---|---|---|---|
| ಇದಿರ್ | ೭ | ೧೧ | ಪ್ರತಿಭಟಿಸಿ ನಿಲ್ಲು, ಎದುರಿಸು |
| ಇದಿರ್ಚು | ೨೭ | ೬೧ | ಪ್ರತಿಭಟಿಸಿ ನಿಲ್ಲು, ಎದುರಿಸು |
| ಇದಿರು | ೩೩ | ೭೯ | ಅನ್ಯ, ಬೇರೆ |
| ಇಂದ್ರಚಾಪ | ೧೯ | ೪೪ | ಕಾಮನಬಿಲ್ಲು |
| ಇನಿತು | ೨೫ | ೫೮ | ಇಷ್ಟು |
| ಇಳೆ | ೨೩ | ೫೫ | ಭೂಮಿ, ನೆಲ |

## ಈ

| | | | |
|---|---|---|---|
| ಈಕ್ಷಣ | ೨೯ | ೬೭ | ಕಣ್ಣು |
| ಈಕ್ಷಿಸು | ೩೧ | ೭೩ | ನೋಡು |
| ಈಳ್ | ೩೯ | ೮೯ | ಸೆಳೆ, ಎಳೆ |

## ಉ

| | | | |
|---|---|---|---|
| ಉಗ್ಗಡಿಸು | ೨೩ | ೫೪ | ಪರಾಕುಹೇಳು, ಬಿರುದುಗಳನ್ನು ಎತ್ತಿ ಹೇಳು |
| ಉತ್ಕಟ | ೭ | ೧೧ | ಸಹಿಸಲಶಕ್ಯ |
| ಉತ್ತರಿಪ | ೩೭ | ೪೩ | ದಾಟುವ |
| ಉತ್ಪಲ | ೧೭ | ೩೬ | ಕನ್ನೈದಿಲೆ |
| ಉಪಾಧಿ | ೩೩ | ೭೭ | ವೈಚಿತ್ರ್ಯ, ವೈಶಿಷ್ಟ್ಯ |

| | | | |
|---|---|---|---|
| ಉಬ್ಬಟೆ | ೧೩ | ૩೦ | ಆರ್ಭಟ |
| ಉಬ್ಬರಿಸು | ೨೩ | ೫೩ | ಹಿಗ್ಗು, ಉಬ್ಬು |
| ಉರ | ೪೧ | ೯೭ | ಎದೆ |
| ಉರ್ವೀತಳ | ೪೩ | ೧೦೧ | ಭೂಭಾಗ |
| ಉಸುರ್ | ૩೭ | ೮೫ | ಉಸಿರಾಡು; ಹೇಳು |
| ಉಳ್ಳುದು | ೨೫ | ೫೬ | ಇರುವುದು |

## ಎ

| | | | |
|---|---|---|---|
| ಎಡರು | ೧೭ | ೪೦ | ಅಡ್ಡಿ, ಆತಂಕ, ಕಷ್ಟ |
| ಎಡೆಯಾಡು | ૩೭ | ೮೬ | ಓಡಾಡು |
| ಎಡೆವಟ್ಟೆ | ૩೯ | ೯೦ | ನಡುದಾರಿ, ಮಾರ್ಗಮಧ್ಯ |
| ಎತ್ತಱತತ್ತಱ | ೧೧ | ೨೧ | ಅಸ್ತವ್ಯಸ್ತ |
| ಎಂತುಟು | ૩೯ | ೯೧ | ಹೇಗೆ |
| ಎಯ್ತರ್ | ೨೩ | ೫೪ | ಎದ್ದು ಬಾ |
| ಎರಡಾಗು | ೧೧ | ೨೩ | ಕವಲೊಡೆ, ಭಿನ್ನವಾಗು; ಸುಳ್ಳಾಗು |
| ಎಱಕ | ೨೩ | ೫೧ | ಮೆಚ್ಚು, ಒಲವು |
| ಎಱಗು | ೧೧ | ೨೩ | ತಾನಾಗಿಬಯಸು, ಮುತ್ತು, ಮೇಲಾಡು. |
| ಎಱತಿ | ೯ | ೧೭ | ಹೊಯ್ಯಿ |
| ಎವೆ | ೨೩ | ೫೫ | ಕಣ್ಣರೆಪ್ಪೆ |
| ಎಳ್ತರ | ೧೭ | ૩೮ | ಎತ್ತರ |

## ಐ

| | | | |
|---|---|---|---|
| ಐದು | ೧೭ | ૩೭ | ಸೇರು, ಸಮೀಪಿಸು |
| ಐದೆ | ೭ | ೧೪ | ಚೆನ್ನಾಗಿ |
| ಐವಡಿಪ | ૩೧ | ೭೩ | ಐದುಮಡಿ ಮಾಡುವ, ಐದರಿಂದ ಗುಣಿಸುವ |
| ಐಸಿರಿ | ೪೧ | ೯೪ | ಸಂಪತ್ತು, ಐಶ್ವರ್ಯ |

## ಒ

| | | | |
|---|---|---|---|
| ಒಗ್ಗೊಡೆ | ೨೩ | ೫೫ | ರಾಶಿಗುಂದು, ಗುಂಪುಚದುರು |
| ಒಡರ್ಚು | ૩ | ೫ | ಉಂಟುಮಾಡು |

| | | | |
|---|---|---|---|
| ಒಡೆಹಂಚು | ೭೨ | ೬೭ | ಒಡೆದ ಹಂಚು |
| ಒತ್ತರ | ೩೨ | ೮೮ | ಗಾಢತೆ |
| ಒತ್ತು | ೧೯ | ೪೩ | ಥಾಳಿಮಾಡು |
| | ೩೩ | ೪೮ | ಸರಿ, ಜರಗು |
| ಒಂದುಗೈ | ೩೨ | ೮೩ | ಐಕ್ಯಗೊಳಿಸು |
| ಒಬ್ಬುಳಿ | ೭೫ | ೫೮ | ರಾಶಿ |
| ಒಯ್ | ೭೫ | ೫೯ | ತೆಗೆದುಕೊಂಡುಹೋಗು |
| ಒರೆ | ೩೯ | ೯೧ | ಪರೀಕ್ಷಿಸು |
| ಒಱಂತೆ | ೩೩ | ೨೬ | ಚಿಲುಮೆ |
| ಒಗ್ಗುಡಿಸು | ೨ | ೧೪ | ಮುರಿದುಹೋಗು ; ಗುಂಪೊಡೆದುಹೋಗು. |

## ಓ

| | | | |
|---|---|---|---|
| ಓಜೆ | ೩೫ | ೮೧ | ಕ್ರಮ |
| ಓಲಗಿಪೆ | ೧೩ | ೩೦ | ಆಶ್ರಯಿಸುವೆ |
| ಓವು | ೭೩ | ೫೭ | ಸಲಹು, ಕಾಪಾಡು ; ಪ್ರೀತಿಸು |

## ಕ

| | | | |
|---|---|---|---|
| ಕಠಾರಿ | ೭೩ | ೫೫ | ಮೋಟುಗತ್ತಿ |
| ಕಡಂಗು | ೧೨ | ೩೨ | ಉತ್ಸಾಹಿಸು |
| ಕಡಲು | ೩೯ | ೮೯ | ಸಮುದ್ರ |
| ಕಡುಪು | " | ,, | ತೀವ್ರತೆ |
| ಕನಕ | ೩ | ೪ | ಚಿನ್ನ |
| —ಅದ್ರಿ | ,, | ,, | ಮೇರುಪರ್ವತ |
| ಕಂದು | ೭೨ | ೬೩ | ಕಾಂತಿಹೀನವಾಗು |
| ಕಪರ್ದಿ | ೧೫ | ೩೩ | ಜಟಾಜೂಟ, ಶಿವ |
| ಕಪಾಲಿ | " | " | ತಲೆಯೋಡನ್ನು ಹೊಂದಿದ ಶಿವ |
| ಕರತಳ | ೩೩ | ೨೮ | ಅಂಗೈ |
| ಆಮಳಕ | ,, | ,, | ಅಂಗೈಮೇಲಣ ನೆಲ್ಲಿಯಕಾಯಿ |
| ಕರಿ | ೩ | ೪ | ಆನೆ |
| ಕರಿಮುರಿಮಾಡು | ೨ | ೧೧ | ಸುಟ್ಟುಹಾಕು |
| ಕರ್ಣಧಾರಕ | ೩೨ | ೮೩ | ಹಡಗು ನಡೆಯಿಸುವವನು; ನಾವಿಕ |

| | | | |
|---|---|---|---|
| ಕರ್ಪರ | ೧೫ | ೩೫ | ತಲೆಯ ಓಡು |
| ಕಲಶಾಬ್ಧಿ | ೩ | ೪ | ಚತುಃಸಮುದ್ರಗಳಲ್ಲಿ ಒಂದು |
| ಕಲ್ಪ | ೫ | ೯ | ಈ ಲೋಕದ ಜೀವಿತಕಾಲ ಸಾವಿರಯುಗ |
| —ತರು | ೩ | ೪ | ದೇವತರು, ಕಲ್ಪವೃಕ್ಷ |
| ಕಲೇವರ | ೧೫ | ೩೫ | ಶರೀರ |
| ಕವರ್ | ೨೫ | ೬೦ | ಸೂರೆಗೊಳ್ಳು |
| ಕಳತ್ರ | ೩೩ | ೭೯ | ಹೆಂಡತಿ |
| ಕಳಲ್ದ | ೩೭ | ೮೬ | ಜಾರಿದ, ಕಳಚಿಬಿದ್ದ |
| ಕಳೆ | ೩ | ೨ | ಕಲೆ, ವಿದ್ಯೆ |
| ಕಾಡಿಗೆ | ೨೫ | ೫೮ | ಕಣ್ಣಿಗೆ ಹಚ್ಚಿಕೊಳ್ಳುವ ಕಪ್ಪು ಕಣ್ಕಪ್ಪು |
| ಕಾನನ | ೧೯ | ೪೨ | ಕಾಡು |
| ಕಾಪು | ೩೯ | ೮೮ | ರಕ್ಷಣೆ, ಕಾವಲು |
| ಕಾಮಿತ | ೩೭ | ೮೭ | ಬಯಸಿದ ವಸ್ತು, ಇಷ್ಟಾರ್ಥ |
| ಕಾಲ | ೧೩ | ೩೦ | ಯಮ |
| —ಕಂಧರ | ೧೫ | ೩೩ | ಯಮನತಲೆಯನ್ನುಧರಿಸಿದ ಶಿವ |
| —ಮೇಘ | ೧೯ | ೪೪ | ಪ್ರಳಯಕಾಲದ ಮೋಡ |
| —ಸಂಹರ | ೧೫ | ೩೩ | ಮೃತ್ಯುಂಜಯ, ಶಿವ |
| ಕಾಳ್ಗೆಡೆವ | ೧೭ | ೩೭ | ಬೈಯ್ಯುವ, ನಿಂದಿಸುವ |
| ಕಿಂಕರ | ೧೭ | ೩೬ | ಸೇವಕ |
| ಕೀಟ | ೭ | ೧೨ | ಹುಳು |
| ಕೀಲ | ೩ | ೧ | ಜ್ವಾಲೆ, ಉರಿ |
| ಕುಕ್ಕುರಿಸು | ೧೩ | ೨೭ | ಕುಸಿದುಬೀಳು |
| ಕುಂಜರಪಾದ | ೧೫ | ೩೫ | ಒಬ್ಬ ರಾಕ್ಷಸ |
| ಕುಜಾತಿ | ೨೭ | ೬೧ | ನೀಚಜಾತಿ, ಕೀಳುಕುಲ |
| ಕುಂಟಣಿ | ,, | ,, | ದೂತಿ |
| ಕುತ್ತ | ೩೭ | ೮೪ | ರೋಗ, ವ್ಯಾಧಿ |
| ಕುಱಿತ್ತು | ೬ | ೧೮ | ಉದ್ದೇಶಿಸಿ, ಲಕ್ಷಿಸಿ |
| ಕುಱುಹಿಡು | ೩೧ | ೭೩ | ಸಂಕೇತವನ್ನು ತಿಳಿ |
| ಕುಲಸತಿ | ೨೩ | ೫೧ | ಸತ್ಕುಲಪ್ರಸೂತಳಾದ ಪತ್ನಿ |

| | | | |
|---|---|---|---|
| ಕುಲಾದ್ರಿ | ೩ | ೩ | ಹಿಮವಂತ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರ, ಗಂಧಮಾದನ, ಹೇಮಕೂಟ ಎಂಬ ಏಳು ಕುಲಪರ್ವತಗಳು |
| ಕೂಪ | ೯ | ೧೨ | ಕುಳಿ, ರಂಧ್ರ |
| ಕೂರ್ | ೭೨ | ೬೪ | ಪ್ರೀತಿಸು |
| ಕೃತಘ್ನ | ೫ | ೧೦ | ಉಪಕಾರಸ್ಮರಣೆಯಿಲ್ಲದವನು |
| ಕೃಶಾನು | ೩ | ೧ | ಅಗ್ನಿ |
| ಕೇಕರಾ | ೧೨ | ೩೬ | ಕಡೆಗಣ್ಣೋಟವನ್ನುಳ್ಳವನೇ |
| ಕೊಕ್ಕರಿಕೆ | ೭೩ | ೫೧ | ಜುಗುಪ್ಸೆ |
| ಕೊರಂಟು | ೩೨ | ೮೬ | ಕೊರಡು, ಒಣಗಿದ ಮೋಟುಮರ |
| ಕೋ | ೭೨ | ೬೩ | ಪವಣಿಸು, ಸರಗೊಳಿಸು |
| ಕೋಟಲೆ | ೯ | ೧೨ | ತೊಂದರೆ, ಬಾಧೆ |
| ಕೋಡು | ೭೨ | ೬೧ | ನಡುಗು, ಅಂಜು |
| ಕೋಳ | ೭೨ | ೬೩ | ಸಂಕೋಲೆ |
| ಕ್ರತು | ೭೨ | ೬೫ | ಯಜ್ಞ |
| ಕ್ಷಿತಿ | ೩ | ೩ | ಭೂಮಿ |
| —ಪಾಲ | „ | „ | ಭೂಪಾಲ, ರಾಜ |

## ಗ

| | | | |
|---|---|---|---|
| ಗಕ್ಕನೆ | ೧೩ | ೩೦ | ಚಕ್ಕನೆ |
| ಗತಿ | ೧೨ | ೩೯ | ಆಶ್ರಯ; ಮಾರ್ಗ |
| ಗರ | ೩೨ | ೮೪ | ಗ್ರಹ |
| ಗಾಂಗ | ೧೨ | ೩೬ | ಗಂಗೆಯ |
| ಗಾಡಿ | ೭೯ | ೬೯ | ಸೊಬಗು |
| ಗಾಢ | ೧೫ | ೩೭ | ದೃಢ |
| ಗಾರಿಗೆ | ೩೩ | ೨೯ | ಖಾತಿಕೆ(ಸಂ.), ಅಗಳು, ಕಂದಕ |
| ಗಾವಿಲ | ೪೩ | ೯೯ | ದಡ್ಡ |
| ಗಾಳುತನ | ೧೨ | ೩೨ | ಒರಟುತನ |
| ಗುಣಗೂಢ | ೧೫ | ೩೭ | ಗುಣಗಳನ್ನು ರಹಸ್ಯವಾಗುಳ್ಳವನು |

| | | | |
|---|---|---|---|
| ಗೋಷ್ಠ | ೧೯ | ೪೧ | ಒಂದು ಬಗೆಯ ಏಕಾಂಕ ನಾಟಕ; ಆಟ |
| ಗೋಷ್ಠಿ | ೧೭ | ೩೯ | ಸಮೂಹ; ಸಂಭಾಷಣೆ. |

## ಘ

| | | | |
|---|---|---|---|
| ಘಟ | ೩೩ | ೭೭ | ಗಡಿಗೆ |

## ಚ

| | | | |
|---|---|---|---|
| ಚಕ್ರವರ್ತಿ | ೩ | ೧ | ಸಾರ್ವಭೌಮ; ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ,ಕಾರ್ತವೀರ್ಯರೆಂಬ ಷಟ್ ಚಕ್ರವರ್ತಿಗಳು. |
| ಚಯ | „ | „ | ಸಮೂಹ |
| ಚರ | ೩೩ | ೭೭ | ಜಂಗಮ |
| ಚಾಪ | ೧೯ | ೪೪ | ಬಿಲ್ಲು |
| ಚಿ: | ೧೯ | ೪೫ | ಇಸ್ಸಿ, ಜುಗುಪ್ಸಾರ್ಥದಲ್ಲಿ ಬಳಸುವ ಪದ. |
| ಚಿತಾಗ್ನಿ | ೧೯ | ೪೫ | ಹೆಣವನ್ನು ಸುಡುವ ಬೆಂಕಿ |
| ಚೋರ | ೩೧ | ೭೪ | ಕಳ್ಳ |

## ಜ

| | | | |
|---|---|---|---|
| ಜನಪತಿ | ೩ | ೩ | ನೃಪತಿ, ರಾಜ |
| ಜನ್ಮ | ೭ | ೧೫ | ಹುಟ್ಟು |
| —ಜಾಡ್ಯ | ೪೩ | ೯೮ | ಜನನವೆಂಬ ರೋಗ |
| ಜರತ್ವ | ೨೧ | ೪೯ | ಮುಪ್ಪು |
| ಜಲನಿಧಿ | ೩ | ೨ | ಸಮುದ್ರ |
| ಜವ | ೧೯ | ೪೩ | ಯಮ |
| ಜಾತಿಧರ್ಮ | ೭ | ೧೫ | ಕುಲದ ವೃತ್ತಿ, ಕಸಬು |
| ಜಾನಿಸಿ | ೨೧ | ೪೭ | ಧ್ಯಾನಮಾಡಿ |
| ಜಾರೆ | ೨೩ | ೫೧ | ವೇಶ್ಯೆ, ಗಣಿಕೆ |
| ಜಿಹ್ವೆ | ೧೩ | ೨೭ | ನಾಲಗೆ |

## ತ

| | | | |
|---|---|---|---|
| ತಕ್ಕು | ೧೩ | ೩೦ | ಯೋಗ್ಯ |
| ತಡೆ | ೩೯ | ೮೯ | ತಳೆ, ಧರಿಸು, ನಿಲ್ಲಿಸು |

| | | | |
|---|---|---|---|
| ತಂಡ | ೪೩ | ೧೦೦ | ಸಮೂಹ |
| ತತ್ತ್ವಸಮೇಷ್ಟಿ | ೩೧ | ೨೩ | ತತ್ತ್ವವನ್ನು ಹುಡುಕುವವರು |
| ತನೂಜ | ೭೧ | ೪೨ | ಮಗ |
| ತನೂಭವ | ೩ | ೭ | |
| ತನೂರುಹ | ೯ | ೧೨ | ರೋಮ, ಕೂದಲು |
| —ಕೂಪ | ” | ” | ರೋಮದ ಕುಳಿ |
| ತರು | ೩ | ೪ | ವೃಕ್ಷ, ಮರ |
| ತಲ್ಲಣ | ೧೯ | ೪೫ | ಭಯ, ನಡುಕ, ಅಂಜಿಕೆ |
| ತವಕ | ೭೨ | ೬೭ | ತ್ವರೆ |
| ತಳಾಱ | ” | ೬೩ | ತಳವಾರ |
| ತಿರು | ೨ | ೧೧ | ಬಿಲ್ಲಿನ ಹಗ್ಗ, ಹೆದೆ |
| ತೀರು | ೭೫ | ೫೮ | ಮುಗಿದು ಹೋಗು |
| ತೀರ್ಚು | ೫ | ೬ | ಪೂರೈಸು, ಮುಗಿಸು ; ನೆರವೇರಿಸು |
| ತುಟ್ಟಿಸು | ೨ | ೧೪ | ಶಕ್ತಿಗುಂದು |
| ತುಡುಗುಣಿ | ೧೨ | ೩೯ | ಕಳ್ಳತನದಿಂದ ತಿಂದು ಬದುಕುವ |
| ತುಷ | ೭೨ | ೬೭ | ಹೊಟ್ಟು |
| ತುಷಾರ | ೧೨ | ೩೬ | ಹಿಮ |
| —ಶೈಲ | ” | ” | ಹಿಮಗಿರಿ |
| ತೃಣಲಘು | ೭೨ | ೬೧ | ಹುಲ್ಲಿಗಿಂತ ಹಗುರ |
| ತೃಷ್ಣೆ | ೭೩ | ೫೭ | ಆಸೆ |
| ತೆಱ | ೪೩ | ೧೦೧ | ರೀತಿ |
| ತೆಱಪು | ೫ | ೯ | ಬಿಡುವು, ಅವಕಾಶ |
| ತೆಱಿ | ೪೩ | ೯೮ | ತೆರಬೇಕಾದ ಹಣ |
| ತೊಡೆ | ೨ | ೧೪ | ಒರಸು, ಅಳಿಸು |
| ತೊಳಲ್ | ೧೨ | ೩೨ | ಅಲೆದಾಡು |
| ತ್ರಯೀ | ೭೩ | ೫೧ | ಋಗ್ವೇದ, ಯಜುರ್ವೇದ ಮತ್ತು ಸಾಮವೇದ—ಈ ಮೂರು. |
| ತ್ರಾಹಿ | ೧೨ | ೩೯ | ರಕ್ಷಿಸು |

## ದ

| | | | |
|---|---|---|---|
| ದಂದುಗ | ೧೩ | ೨೬ | ವ್ಯಸನ |
| ದಾರೆವಟ್ಟಲು | ೫ | ೭ | ಅಭಿಷೇಕದ ಪಾತ್ರೆ |
| ದಾಸಿ | ೨೩ | ೫೧ | ಭೃತ್ಯೆ |
| ದಿಕ್ಕರಿ | ೩ | ೪ | ದಿಕ್ಕನ್ನು ಹೊತ್ತಿರುವ ಆನೆ |
| ದಿಗಂಬರ | ೧೫ | ೩೩ | ದಿಕ್ಕುಗಳೇ ವಸ್ತ್ರವಾಗುಳ್ಳವ, ಶಿವ |
| ದಿಶಾಗಜ | ೩ | ೨ | ದಿಗ್ಗಜ |
| ದಿಶಾಪತಿ | " | ೩ | ದಿಕ್ಕಿನ ಒಡೆಯ, ದಿಕ್ಪಾಲಕ. |
| ದುರಿತ | ೧೭ | ೩೮ | ಪಾಪ |
| ಧುಷ್ಕೃತ | ೩ | ೫ | ದುಷ್ಟಕಾರ್ಯ, ಪಾಪ |
| ದೇಹಿ | ೨೫ | ೮೨ | ಶರೀರವನ್ನು ಧರಿಸಿದವ, ಆತ್ಮ |

## ಧ

| | | | |
|---|---|---|---|
| ಧನಂಜಯಾಕ್ಷ | ೧೫ | ೩೨ | ಉರಿಗಣ್ಣ, ಶಿವ |
| ಧನಾಧಿಪ | " | " | ಕುಬೇರ |
| —ಮಿತ್ರ | " | " | ಕುಬೇರನ ಸ್ನೇಹಿತ, ಶಿವ |
| ಧರಾಧರ | ೧೫ | ೩೩ | ಪರ್ವತ |
| —ಧನ್ವಿ | " | " | ಮೇರುಪರ್ವತವನ್ನೇ ಧನುಸ್ಸಾಗಿ ಉಳ್ಳವ, ಶಿವ |
| ಧೂರ್ಜಟಿ | ೧೫ | ೩೨ | ಭಾರವಾದ ಜಟೆಯುಳ್ಳವ, ಶಿವ |
| ಧೂರ್ತ | ೨೫ | ೫೭ | ದುಷ್ಟ |

## ನ

| | | | |
|---|---|---|---|
| ನನೆಕೊನೆಯೋಗು | ೧೩ | ೨೬ | ಪ್ರಫುಲ್ಲವಾಗು, ಸಂತಸಗೊಳ್ಳು |
| ನರ | ೨೫ | ೬೦ | ಮಾನವ |
| —ಅಧಮ | " | " | ಕೀಳುಮನುಷ್ಯ |
| ನವಿರ್ | ೧೫ | ೩೧ | ಕೂದಲು |
| —ಮೂಡು | " | " | ಕೂದಲು ಮೇಲೇಳು ಮೈ ಜುಮ್ಮೆನ್ನು |
| ನಾಗ | ೧೫ | ೩೩ | ಸರ್ಪ |
| —ಶೇಖರ | " | " | ಸರ್ಪಭೂಷಣ, ಶಿವ |
| ನಾಹಂ | ೩೩ | ೭೮ | ದೇಹವು ಆತ್ಮನಾದ ತಾನಲ್ಲ ಎಂಬ ಭಾವ |

| | | | |
|---|---|---|---|
| ನಿಕ್ಕುವಂ | ೩೩ | ೭೭ | ನಿಶ್ಚಯವಾಗಿ |
| ನಿಗಮ | ೪೧ | ೯೩ | ವೇದಸಮೂಹ |
| ನಿಜಲೀಲೆ | ೩೯ | ೯೧ | ಪರಮಾತ್ಮನ ಸ್ವಲೀಲೆ |
| ನಿಟಲ | ೧೫ | ೩೩ | ಹಣೆ |
| —ಅಕ್ಷ | ,, | ,, | ಹಣೆಯಲ್ಲಿ ಕಣ್ಣುಳ್ಳವ, ವಿರೂಪಾಕ್ಷ |
| ನಿಟ್ಟಿಸು | ೩೯ | ೯೦ | ನೋಡು |
| ನಿತಂಬ | ೨೯ | ೬೯ | ಕಟಿಪಶ್ಚಾದ್ಭಾಗ |
| ನಿಮಿರ್ಚು | ೧೧ | ೨೨ | ಹರಡು ; ಮಾಡು |
| ನಿಮ್ನನಿರ್ಜರ | ೧೫ | ೩೫ | ರಾಕ್ಷಸ, ದೈತ್ಯ |
| ನಿರಂತರ | ೧೩ | ೨೮ | ಎಡೆಬಿಡದೆ, ಸಂತತವಾಗಿ |
| ನೀರಡಸು | ೭ | ೧೪ | ಬಾಯಾರಿಕೆಯಾಗು |
| ನೀಱುವೆಣ್ | ೯ | ೨೦ | ಸುಂದರಿ,ಮನೋಹರಳಾದ ಸ್ತ್ರೀ |
| ನುತಿಸು | ೩ | ೧ | ಕೊಂಡಾಡು, ಸ್ತುತಿಸು |
| ನೆಗಳ್ತೆ | ೨೯ | ೬೬ | ಕ್ರಿಯೆ |
| ನೆರವಿ | ೨೭ | ೬೪ | ಗುಂಪು |
| ನೆರೆ | ೩೫ | ೮೦ | ಸೇರು, ಹೊಂದು |
| ನೆಲೆ | ೩೩ ೪೩ | ೭೭ ೯೯ | ಸ್ಥಿರ, ಶಾಶ್ವತ ; ನಿತ್ಯತೆ |
| ನೇಣ್ | ೩೧ | ೭೪ | ಹಗ್ಗ |
| ನೋನ್ | ೨೧ | ೪೬ | ವ್ರತಮಾಡು |

## ಪ

| | | | |
|---|---|---|---|
| ಪಂಕಜ | ೩ | ೧ | ಕಮಲ |
| —ಅರಿ | ೧೫ | ೩೫ | ಕಮಲವೈರಿ, ಚಂದ್ರ |
| ಪಗೆ | ೧೯ | ೪೩ | ಶತ್ರು |
| ಪಗೆಯ | ೩೩ | ೭೬ | ಹಗೆಯ, ಹಗೇವು |
| ಪಜ್ಜೆ | ೨೭ | ೬೩ | ಪಾದ |
| —ಏಱಿದ | ,, | ,, | ಕಾಲಿಗೆ ತೊಡಿಸಿದ |
| ಪಟೀರ | ೧೫ | ೩೫ | ಕಾಮ, ಮನ್ಮಥ |
| ಪಂಚಶರ | ,, | ,, | ಪಂಚಬಾಣ, ಮನ್ಮಥ |

| | | | |
|---|---|---|---|
| ಪಣ | ೨೭ | ೬೩ | ಹಣ, ನಾಣ್ಯ |
| ಪದವಿಡು | ೩೯ | ೯೨ | ಕಾಲಿಡು |
| ಪದ್ಮಗರ್ಭ | ೧೫ | ೩೫ | ಕಮಲಗರ್ಭ, ಬ್ರಹ್ಮ |
| ಪದಿರುವಾತು | ೨೯ | ೬೯ | ದ್ವಂದ್ವಾರ್ಥವನ್ನುಳ್ಳ ಮಾತು |
| ಪದುಳಿಸು | ೧೧ | ೨೧ | ಸಮಾಧಾನ ಪಡಿಸು, ಸಂತೋಷ ಪಡಿಸು |
| ಪಡೆ | ೨೯ | ೬೯ | ಆಶಿಸು, ಬಯಸು |
| ಪನ್ನಗ | ೧೫ | ೩೫ | ಸರ್ಪ |
| —ಇಂದ್ರ | ೧೫ | ೩೫ | ಸರ್ಪರಾಜ |
| ಪಯೋಜ | ೯ | ೧೬ | ಕಮಲ |
| ಪಯೋಧರ | ೩೭ | ೮೬ | ಕುಚ |
| ಪರಕಟಕ | ೩೭ | ೮೩ | ಶತ್ರುಸೈನ್ಯ |
| ಪರಿಕಾಲ್ | ೩೩ | ೭೬ | ಕಾಲುವೆ |
| ಪರಿಕಿಸು | ೩೫ | ೮೦ | ಪರೀಕ್ಷಿಸು |
| ಪರಿಭೂತ | ೧೫ | ೩೫ | ತಿರಸ್ಕೃತ |
| ಪರಿವೃತ | ೩ | ೪ | ಸುತ್ತುವರಿದ |
| ಪರೇಶ | ೧೫ | ೩೪ | ಪರಮೇಶ್ವರ |
| ಪರ್ಣಕುಟಿ | ೧೯ | ೪೨ | ಎಲೆವನೆ |
| ಪರ್ವು | ೪೩ | ೧೦೧ | ಹಬ್ಬು |
| ಪವಣು | ೩೭ | ೮೫ | ಪ್ರಮಾಣ, ಗಾತ್ರ |
| ಪಳಿ | ೧೧ | ೨೩ | ನಿಂದೆ |
| ಪಾಂಗು | ೧೩ | ೨೮ | ರೀತಿ, ಬಗೆ |
| ಪಾಟನ | ೨೯ | ೬೮ | ಚೂರುಚೂರು ಮಾಡುವಿಕೆ, ಸೀಳುವಿಕೆ |
| ಪಾಟಿತ | ೧೫ | ೩೫ | ಸೀಳಿದ |
| ಪಾರ್ಯ್ | ೨೧ | ೪೯ | ಮುನ್ನುಗ್ಗು |
| ಪಾಶ | ೩೩ | ೭೫ | ಹಗ್ಗ |
| ಪಾಸಟಿ | ೪೧ | ೯೫ | ಸಮಾನ |
| ಪಾಳಿಡೆ | ೨೭ | ೬೨ | ಹಾಳುಭೂಮಿ, ಪಾಳ್ನೆಲ |
| ಪಿನಾಕಿ | ೧೫ | ೩೩ | ಪಿನಾಕ ಧನುರ್ಧಾರಿ, ಶಿವ |
| ಪೀನ | ೨೯ | ೬೯ | ಗಾತ್ರವಾದ |
| ಪುತ್ತು | ೨೫ | ೫೮ | ಹುತ್ತ |

| | | | |
|---|---|---|---|
| ಪುದಿ | ೨೩ | ೫೪ | ಗುಂಪುಗೂಡು, ಅಡಗು |
| ಪೂಣ್ | ೩೯ | ೯೨ | ಪ್ರತಿಜ್ಞೆ |
| ಪೂತಿಗಂಧ | ೩೧ | ೭೨ | ಕೆಟ್ಟವಾಸನೆ, ದುರ್ಗಂಧ |
| ಪೂಸು | ೪೧ | ೯೭ | ಲೇಪಿಸು |
| ಪೆರ್ಬುಲಿ | ೨೭ | ೬೧ | ದೊಡ್ಡಹುಲಿ |
| ಪೆಜಿರ್ | ೧೧ | ೨೫ | ಅನ್ಯರು, ಬೇರೆಯವರು |
| ಪೇಸು | ೩೧ | ೭೧ | ಹೇಸು, ಅಸಹ್ಯಪಡು |
| ಪೊಡರ್ಪು | ೭ | ೧೩ | ಪ್ರತಾಪ |
| ಪೊದಳ್ | ೨೧ | ೪೯ | ಹೊಮ್ಮು |
| ಪೊನ್. | ೭ | ೧೨ | ಸುವರ್ಣ, ಚಿನ್ನ |
| ಪೊಯ್ | ೨೭ | ೬೩ | ತಾಕು |
| ಪೊರೆ | ೨೩ | ೫೨ | ಕಾಪಾಡು |
| ಪೊರ್ದು | ೧೧ | ೨೩ | ಸೇರು, ಹೊಂದು |
| ಪೊಲಂಬಿಗ | ೩೭ | ೮೩ | ದಾರಿಬಲ್ಲವ |
| ಪೌವನೆ | ೨೧ | ೫೦ | ಹವ್ವನೆ, ತಟಕ್ಕನೆ |
| ಪ್ರಕರ | ೩೫ | ೮೨ | ಗುಂಪು |
| ಪ್ರಸರ | ೫ | ೮ | ಸಮೂಹ |

## ಫ

| | | | |
|---|---|---|---|
| ಫಣಿ | ೩೩ | ೭೫ | ಸರ್ಪ |
| —ಭ್ರಮೆ | ೩೩ | ೭೫ | ಹಗ್ಗವನು ಹಾವುಎಂದು<br>ಭ್ರಾಂತಿಗೊಳ್ಳುವುದು |

## ಬ

| | | | |
|---|---|---|---|
| ಬಗೆ | ೫ | ೭ | ಮಾರ್ಗ |
| —ಕಾಣು | ೫ | " | ದಾರಿತಿಳಿ, ವಿಧಾನವನ್ನು ಅರಿ |
| ಬಡ್ಡಿ | ೨೫ | ೫೬ | (ಸಂ) ವೃದ್ಧಿ |
| ಬಲಿ (ಕ್ರಿ) | ೧೭<br>೨೧ | ೩೮<br>೪೯ | } ಗಟ್ಟಿಗೊಳ್ಳು ; ಹೊಸೆ |
| ಬಳಲ್ಚು | ೨೫ | ೬೦ | ಆಯಾಸಗೊಳಿಸು |
| ಬಾಕುಳಿ | ೯ | ೧೯ | ದುರಾಸೆ |

| | | | |
|---|---|---|---|
| ಬಾಳಕ | ೨೫ | ೫೬ | ಕತ್ತರಿಸಿ ಒಣಗಿಸಿದ ಮೆಣಸಿನ ಕಾಯಿ ಇತ್ಯಾದಿ |
| ಬಾಳ್ಕೆಗೈ | ೨೫ | ೫೭ | ಉಪಯುಕ್ತಗೊಳಿಸು, ಪ್ರಯೋಜನಮಾಡು |
| ಬಾಳ್ತೆನೆ | ೨೯. | ೪೬ | ಬದ್ದೆನೆ, ಬದುಕಿದೆನೆ. ಬಾಳ್(ಧಾ) ಬಾಳ್+ತು+ಎನ್+ಎ = ಬಾಳ್ತೆನೆ>ಬಾತೆನೆ. |
| ಬಿಕ್ಕು | ೨೧ | ೫೦ | ಬಿಕ್ಕಳಿಕೆ |
| ಬಿಂಕ | ೧೯ | ೪೫ | ಗರ್ವ, ಅಹಂಕಾರ |
| ಬಿಗುಹು | ೨೩ | ೫೩ | ಬಿಗುಮಾನ |
| ಬಿಡಸ್ತನ | ೨೯ | ೬೯ | ಒಂದನ್ನೊಂದು ಬಿಡದ ಕುಚ, ತುಂಬಿದ ಎದೆ |
| ಬಿಡಹ | ೩೯ | ೮೯ | ಹೆಣ್ಣುಮಕ್ಕಳ ಕೈಬಳೆ. [ಪಿಡಿಹಂ(ತ)>ಬಿಡಿಹಂ> ಬಿಡಹ>ಬಿಡಹಂ. ಹೋಲಿಸಿ:-. ಪಿಗಿ (ತ) ಬಿಗಿ (ಕ); ಪೆಳ್ಪಳಿಸು>ಬೆಳ್ಪಳಿಸು.] |
| ಬಿತ್ತು | ೪೩ | ೧೦೧ | ಬೀಜ |
| ಬೆಂಚೆ | ೩೩, | ೭೬ | ಸಣ್ಣ ಕೊಳ |
| ಬೇಳ್ವಿಯ | ೨೯ | ೬೭ | ಮರುಳುಮಾಡುವ |
| ಬೊಬ್ಬುಳಿಕೆ | ೩೫ | ೮೦ | ನೀರಗುಳ್ಳೆ |
| ಬೊಮ್ಮ | ೨೯ | ೬೬ | ಬ್ರಹ್ಮ |
| ಬೋಳೆಯ | ೩೯ | ೮೮ | ದೇವತೆ |

## ಭ

| | | | |
|---|---|---|---|
| ಭಂಗಿಸು | ೨೫ | ೬೦ | ಅಪಮಾನ ಗೊಳಿಸು |
| ಭರ್ಗ | ೧೫ | ೩೩ | ಪ್ರಕಾಶ, ಶಿವ |
| ಭವ | ೨೩ | ೫೧ | ಸಂಸಾರ, ಜನನ–ಮರಣ |
| —ಬಂಧ | ೧೭ | ೪೦ | ಸಂಸಾರ ಬಂಧನ |
| —ಭ್ರಮಣ | ೩೧ | ೭೪ | ಹುಟ್ಟುಸಾವುಗಳ–ಸುತ್ತಾಟ |
| —ರೋಗಿ | ೩೧ | ” | ಜನ್ಮವೆಂಬವ್ಯಾಧಿ ಹೊಂದಿದವನು |

| | | | |
|---|---|---|---|
| ಭವತ್ಪಾದ | ೯ | ೧೬ | ನಿಮ್ಮಪಾದ |
| ಭವದೀಯ | ೨ | ೧೩ | ನಿಮ್ಮ |
| ಭಸ್ಮ | ೪೧ | ೯೩ | ವಿಭೂತಿ |
| ಭಾಸುರ | ೧೫ | ೭೭ | ಪ್ರಕಾಶಮಾನ |
| ಭೀಮ | ೧೫ | ೭೩ | ಶಿವ |
| ಭೂತ | ೭೧ | ೨೦ | ಪ್ರಾಣಿ; ಪಿಶಾಚಿ |
| —ಗಣೇಶ | ೧೫ | ೭೩ | ಪ್ರಾಣಿಸಮೂಹಗಳ ಒಡೆಯ, ಶಿವ |

## ಮ

| | | | |
|---|---|---|---|
| ಮಚ್ಚುಮದ್ದು | ೩೧ | ೪೨ | ಮೋಹದ ಉನ್ಮತ್ತತೆ, ಪ್ರಣಯೋನ್ಮಾದ |
| ಮದ | ೩೨ | ೬೧ | ಗರ್ವ |
| —ದ್ವಿಪ | ” | ” | ಮದಿಸಿದ ಆನೆ |
| —ಹಾರಿ | ೧೨ | | ಗರ್ವಭಂಗಮಾಡಿದವನು |
| ಮದನ | ೪೧ | ೯೭ | ಮನ್ಮಥ |
| ಮದೀಯ | ೧೪ | ೯೫ | ನನ್ನ |
| ಮದ್ಯ | ೨ | ೧೭ | ಹೆಂಡ |
| ಮನದನ್ನದ | ೧೭ | ೩೬ | ಮನಸ್ಸಿಗೆಒಪ್ಪಿದ, ಪ್ರಿಯವಾದ |
| ಮನವಾರಿ | ೯ | ೧೮ | ಮನಸ್ಸು ತಣಿಯುವಂತೆ |
| ಮನಸಿಜ | ೧೭ | ೭೦ | ಮನ್ಮಥ |
| ಮನೆವಾಳ್ತೆ | ೧೭ | ೩೬ | ಮನೆಗೆಲಸ, ಮನೆ ಆಡಳಿತ |
| ಮನೋಜ | ೧೨ | ೪೦ | ಮನ್ಮಥ, ಮನಸಿಜ |
| ಮಮಕಾರ | ೩೧ | ೪೬ | ನನ್ನದು ಎಂಬ ಭಾವ |
| ಮರುಹು | ೯ | ೧೯ | ಅಜ್ಞಾನ, ಮಾಯೆ |
| ಮರೀಚಿಕ | ೭೩ | ೨೫ | ಬಿಸಿಲ್ಗುದುರೆ |
| ಮರುಳ್ | ೪೧ | ೯೭ | ಭೂತ |
| ಮರುಳ್ಗೊಳು | ೧೯ | ೪೭ | ಮರುಳಾಗು, ಮೋಹಗೊಳ್ಳು |
| ಮರ್ತ್ಯ | ೨ | ೧೫ | ಮರಣಕ್ಕೀಡಾದ; ಮನುಷ್ಯ |
| ಮರ್ದಿಸು | ೩೨ | ೬೭ | ಗುದ್ದು |
| ಮಹೇಂದ್ರಜಾಲ | ೩೧ | ೪೯ | ಮಾಯಾಜಾಲ, ಅದ್ಭುತಘಟನೆ |

| | | | |
|---|---|---|---|
| ಮಾನಸರ್ | ೧೩ | ೨೬ | ಮನುಷ್ಯರು |
| ಮಾರ | ೭ | ೧೧ | ಮನ್ಮಥ, ಕಾಮ |
| ಮಾರ್ಬಲ | ೩ | ೨ | ಪ್ರತಿಭಟಿಸುವ ಸೈನ್ಯ |
| ಮಾಳ್ಕೆ | ೨೧ | ೪೮ | ವಾಲುವಿಕೆ, ಜಾರುವಿಕೆ, ಅಪಸರಣ |
| ಮಿಹಿರ | ೫ | ೧೦ | ಸೂರ್ಯ |
| ಮುಖಂಗೊಡು | ೧೯ | ೪೩ | ಮುಖಕೊಟ್ಟು ಮಾತನಾಡು |
| ಮುನಿ | ೧೧ | ೨೫ | ಕೋಪಗೊಳ್ಳುವವನು; ತಪಸ್ವಿ |
| ಮುದ್ರಿಕೆ | ೪೧ | ೯೬ | ಉಂಗುರ |
| ಮುಂಬನಿ | ೧೯ | ೪೪ | ಮುಂಜಾನೆಯ ಹನಿ |
| ಮುಱಿಯೊತ್ತು | ೭ | ೧೪ | ಮುರಿದು ಅದುಮು |
| ಮುಹೂರ್ತ | ೧೯ | ೪೩ | ವೇಳೆ |
| ಮುಳಿ | ೨೧ | ೪೬ | ಕೋಪಗೊಳ್ಳು |
| ಮೂವಿಧಿ | ೩೭ | ೮೭ | ದುರ್ವಿಧಿ, ದುರ್ದೈವ |
| ಮೃಕಂಡು | ೩೯ | ೯೦ | ಒಬ್ಬ ಋಷಿ |
| ಮೃಡಾಣಿ | ೪೧ | ೯೩ | ಮೃತ್ಯುಂಜಯನಾದ ಶಿವನ ಸತಿ, ಪಾರ್ವತಿ |
| ಮೇಳವಾಡು | ೨೫ | ೫೯ | ಸರಸವಾಡು |
| ಮೈನವಿರ್ | ೧೫ | ೩೧ | ಮೈ ಕೂದಲು |
| ಮೈಮೆ | ೪೩ | ೧೦೦ | ಮಹಿಮೆ |
| ಮೊದಲ್ | ೯ | ೧೭ | ಬುಡ |

## ಯ

| | | | |
|---|---|---|---|
| ಯಾಮಿನೀ | ೧೭ | ೩೬ | ರಾತ್ರಿ |
| —ಕರ | ” | ” | ರಾತ್ರಿಯನ್ನುಂಟುಮಾಡುವವ, ಚಂದ್ರ. |

## ರ

| | | | |
|---|---|---|---|
| ರಜತ | ೩೩ | ೭೫ | ಬೆಳ್ಳಿ |
| —ಭ್ರಮೆ | ” | ” | ಬೆಳ್ಳಿ ಎಂಬ ಭ್ರಾಂತಿ |

| | | | |
|---|---|---|---|
| ರಥೋತ್ಸವ | ೭೫ | ೫೨ | ಪ್ರಸ್ತದ ಔತಣ |
| ರೂಢಿಸು | ೫ | ೮ | ಹೊಂದು, ಗಳಿಸು. |

## ಲ

| | | | |
|---|---|---|---|
| ಲಲಾಟ | ೨ | ೧೪ | ಹಣೆ |

## ವ

| | | | |
|---|---|---|---|
| ವಾದ | ೭೨ | ೬೩ | ರಸವಿದ್ಯೆ, ಕೀಳುಲೋಹವನ್ನು ಚಿನ್ನವನ್ನಾಗಿ ಮಾಡುವ ವಿದ್ಯೆ. |
| ವಾಯಸ | ೧೯ | ೪೫ | ಕಾಗೆ |
| ವಾರಿಕಲ್ಲು | ೩೧ | ೨೭ | ಆಲಿಕಲ್ಲು |
| ವಿಗ್ರಹ | ೩ | ೧ | ಶರೀರ |
| ವಿತ್ತ | ೧೨ | ೪೦ | ಧನ, ಸಂಪತ್ತು |
| ವಿಬುಧ | ೩೯ | ೯೧ | ದೇವತೆ |
| —ಇಂದ್ರ | ,, | ,, | ದೇವೇಂದ್ರ |
| ವಿಭಾವಸು | ೩೯ | ,, | ಸೂರ್ಯ |
| ವಿರಿಂಚಿ | ೩ | ೩ | ಬ್ರಹ್ಮ |
| ವಿಳಾಸಿನಿ | ೧೨ | ೪೦ | ಸೊಗಸುಗಾತಿ |
| ವೀತಿಹೋತ್ರ | ೩೯ | ೯೧ | ಅಗ್ನಿ |
| ವೃಂದ | ೫ | ೯ | ಸಮೂಹ |
| ವೆಗ್ಗಳಿಸು | ೭೯ | ೬೮ | ಉನ್ನತವಾಗು, ಹಿರಿಯನಾಗು, |

## ಶ

| | | | |
|---|---|---|---|
| ಶಚೀಪತಿ | ೩ | ೧ | ಇಂದ್ರ |
| ಶಂಬರ | ,, | ,, | ಒಬ್ಬ ದೈತ್ಯ, ಕಾಮನ ಶತ್ರು |
| —ವೈರಿ | ,, | ,, | ಕಾಮ, ಮನ್ಮಥ |
| ಶಲಭ | ,, | ,, | ಪತಂಗ |
| ಶಶಿ | ೫ | ೧೦ | ಚಂದ್ರ |
| ಶಾಖೆ | ೯ | ೧೨ | ಕೊಂಬೆ, ರೆಂಬೆ |

| | | | |
|---|---|---|---|
| ಶಿತಿ | ೧೫ | ೩೨ | ನೀಲ, ಕಪ್ಪು |
| —ಕಂಠ | " | " | ನೀಲಕಂಠ, ಶಿವ |
| ಶಿವಗೇಹ | ೧೭ | ೩೭ | ಶಿವಗೃಹ, ಶಿವಾಲಯ |
| ಶುಕ್ತಿ | ೩೩ | ೭೫ | ಕಪ್ಪೆಚಿಪ್ಪು |
| ಶೇಖರ | ೧೫ | ೩೨ | ತಲೆಯ ಆಭರಣ |
| ಶೇಷ | " | " | ಆದಿಶೇಷ, ಸರ್ಪರಾಜ |
| ಶೈಲಜಾ | " | " | ಪಾರ್ವತಿ |
| —ಧವ | " | " | ಪಾರ್ವತೀಪತಿ |
| ಶ್ವಾನ | ೭ | ೧೫ | ನಾಯಿ |
| ಶ್ರುತಿ | ೨೭ | ೬೫ | ವೇದ |

## ಸ

| | | | |
|---|---|---|---|
| ಸಕ್ಕಸಮ | ೭ | ೧೫ | ಸರಿಸಮ |
| ಸಗ್ಗ | " | ೧೩ | ಸ್ವರ್ಗ |
| ಸಂಕುಲ | ೩೧ | ೭೦ | ಸಮೂಹ |
| ಸಂಗರ | ೨೭ | ೬೧ | ಯುದ್ಧ |
| ಸಂತಸ | ೧೫ | ೩೧ | ಸಂತೋಷ |
| ಸಂದಿಗ | ೯ | ೨೦ | ಸಂದೇಹ, ಸಂಶಯ |
| ಸಮಂತು | ೧೯ | ೪೩ | ಚೆನ್ನಾಗಿ |
| ಸಂಯಮಿ | ೩೩ | ೭೫ | ಇಂದ್ರಿಯನಿಗ್ರಹಿ, ತಪಸ್ವಿ |
| ಸರವಿ | ೧೭ | ೩೮ | ಹಗ್ಗ |
| ಸರಳ್ | ೭ | ೧೧ | ಬಾಣ |
| ಸರಿ | ೧೭ | ೩೮ | ಹಗ್ಗ ; ದೂರಹೋಗು |
| —ಬಲಿ | " | " | ಹಗ್ಗಹೊಸೆ |
| ಸಲಪು | ೨೩ | ೫೨ | ಕಾಪಾಡು |
| ಸವೆ | ೧೩ | ೨೮ | ರಚಿಸು, ನಿರ್ಮಿಸು |
| ಸಸಿನೆ | ೫ | ೮ | ನೆಟ್ಟನೆ, ಸುಮ್ಮನೆ ; ನೇರ. |
| ಸಂಸರಣ | ೨೯ | ೬೮ | ಸುತ್ತಾಟ, ಸಂಸಾರ |
| ಸಂಸೃತಿ | ೫ | ೭ | ಸಂಸಾರ |
| ಸಂಹೃತಿ | ೧೭ | ೩೬ | ಸಂಹಾರ |
| ಸಾವ | ೨೫ | ೫೯ | ಸಾಯುವ |

| | | | |
|---|---|---|---|
| ಸಾಜ | ೨೧ | ೪೮ | ಸಹಜ |
| ಸಾರ್ | ೨೭ | ೯೪ | ಸಮಾಪಿಸು |
| ಸಿತ | ೩೩ | ೭೫ | ಬಿಳುಪಾದ, ಬಿಳಿಯ |
| ಸಿಂಧು | ೩೭ | ೮೩ | ಸಮುದ್ರ |
| ಸೀ | ೨೩<br>೨೭ | ೫೫<br>೬೪ | ಸುಟ್ಟು, ಕರಿಕಾಗು<br>ಬೆಲೆಕೊಡು, ಲಕ್ಷಿಸು |
| ಸೀಕರ | ೧೭ | ೩೬ | ಹನಿ, ತುಂತರು |
| ಸೀಮೆ | ೩ | ೨ | ಮೇರೆ, ಎಲ್ಲೆ |
| ಸುಂಕ | ೪೩ | ೯೮ | ಶುಲ್ಕ (ಸಂ). ಪಟ್ಟಣದೊಳಗೆ ತರುವ ವಸ್ತುಗಳಿಗಾಗಿ ಕೊಡಬೇಕಾದ ಹಣ |
| ಸುದತಿ | ೧೧ | ೨೧ | ಒಳ್ಳೆಯ ದಂತಪಂಙ್ತಿಯುಳ್ಳ ಸ್ತ್ರೀ |
| ಸುಧಾಕರ | ೪೩ | ೧೦೧ | ಚಂದ್ರ |
| ಸುಧಾರಸ | ೯ | ೨೦ | ಅಮೃತ |
| ಸುಪರ್ವ | ೩ | ೩ | ದೇವತೆ, ದಿವಿಜ |
| —ಭೂಮಿರುಹ | ” | ” | ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ ಎಂಬ ಸ್ವರ್ಗ ಲೋಕದ ಐದು ವೃಕ್ಷಗಳು |
| ಸುಯ್ | ೧೩ | ೨೭ | ಉಸಿರಾಡು |
| ಸೂನು | ೪೧ | ೯೭ | ಮಗ |
| ಸೂನೃತ | ೧೯ | ೪೧ | ನಿಜ, ಸತ್ಯ |
| ಸೂರುಳಿಡು | ೧೩ | ೨೭ | ಶಪಥಮಾಡು, ಆಣೆಯಿಡು |
| ಸೂಸಲು | ೨೯ | ೬೭ | ಎಳ್ಳು ಬೆಲ್ಲಗಳಿಂದ ಮಾಡಿದ ಆಹಾರ ಪದಾರ್ಥ, ತಿಲೌದನ |
| ಸೂಸು | ” | ” | ಚೆಲ್ಲು |
| ಸೈತೆ | ೭ | ೧೩ | ಸರಿಯಾಗಿ, ನೆಟ್ಟನೆ |
| ಸೈಪು | ೧೫ | ೩೧ | ಪುಣ್ಯ |
| ಸೊರಹು | ೫ | ೬ | ಹರಟು |
| ಸೊಲ್ಲು | ೪೧ | ೯೩ | ನುಡಿ, ಮಾತು |
| ಸೋದಿಗೆ | ೪೩ | ೯೮ | ಶೋಧನದ ತೆರಿಗೆ |

| | | | |
|---|---|---|---|
| ಸೋಮ್ಮುಡಿ | ೩೯ | ೮೯ | ಜೋಲಾಡುವ ಮುಡಿ |
| ಸ್ಮೃತಿ | ೫ | ೯ | ವೇದಗಳ ನಾಲ್ಕು ಉಪಾಂಗಳ ಗಳಲ್ಲಿ ಒಂದು. ಮನುವೆ ಮೊದಲಾದವರ ಹೆಸರಿನಿಂದ ಪ್ರಸಿದ್ಧವಾದ ಧರ್ಮಶಾಸ್ತ್ರಗಳು. ಇವು ವೇದಗಳ ಅರ್ಥವನ್ನು ಸ್ಮರಣೆಗೆ ತಂದುಕೊಡುವುವು. |
| ಸ್ಥಾಣು | ೩೧ | ೭೪ | ಮೋಟುಮರ |

## ಹ

| | | | |
|---|---|---|---|
| ಹಱಿ | ೪೩ | ೯೮ | ಕತ್ತರಿಸು, ಪರಿಹಾರವಾಗು |
| ಹರಣ | ೨೧ | ೫೦ | ಪ್ರಾಣ |
| ಹರಿಣ | ೧೫ | ೩೩ | ಜಿಂಕೆ |
| ಹವಿ | ೯ | ೧೬ | ಅಗ್ನಿಗೆ ಅರ್ಪಿಸುವ ತುಪ್ಪವೇ ಮೊದಲಾದುದು |
| ಹಿಗ್ಗು | ೧೫ | ೩೧ | ಸಂತೋಷದಿಂದ ಉಬ್ಬು |
| ಹಿಂಗು | ೨೩ | ೫೪ | ಕಣ್ಮರೆಯಾಗು |
| ಹುತವಹ | ೨೭ | ೬೫ | ಅಗ್ನಿ |
| ಹೇಹ | ೫ | ೬ | ಹೇಯ, ಅಸಹ್ಯ, ತ್ಯಾಜ್ಯ |
| ಹೊಱತಿ | ೪೩ | ೯೮ | ಹೊರಿಗಾಗಿ ಕೊಡುವ ಶುಲ್ಕ |

# ಶಂಕರ ಶತಕದ ಅಕಾರಾದಿ ವೃತ್ತಸೂಚೀ

| | | | | |
|---|---|---|---|---|
| ಎಡ ಬಲ ಮುಂದೆ ಪಿಂದೆ ಪುದಿದೆಯ್ತ್ತರೆ | ೫೪ | ೫೪ | ೫೯ | ೬೧ |
| ಎಡರಡಸಿರ್ದ ಪೊತ್ತು ಪಗೆಯೊತ್ತಿದವೇಳೆ | ೪೩ | ೪೩ | ೪೮ | ೪೦ |
| ಎಡವಿಡದಡ್ಡಣಂಗಳ ಕಠಾರಿಯ ಕತ್ತಿಯ ಮೊತ್ತ | ೫೫ | ೫೫ | ಇಲ್ಲ | |
| ಎಡಹಿದಡಲ್ಲಿ ನೀರ್ಗುಡಿದಡಲ್ಲಿ | ೫೦ | ೫೦ | ೫೫ | ೪೭ |
| ಎಡಹುತ ತಾಗಿ ಕುಕ್ಕುರಿಸಿ ಸೀನುತೆ (ಶಿ) | ೨೮ | ೨೭ | ೪೧ | ೩೦ |
| ಎನ್ನದೆನಿಪ್ಪ ಮಿತ್ರ ಧನಮಂದಿರ | ೭೯ | ೭೯ | ೯೧ | |
| ಎಲ್ಲಿಯ ಸ್ವರ್ಗಮೆಲ್ಲಿಯ ಸುಧಾರಸ | ೨೦ | ೨೦ | ೨೮ | |
| ಏಱಿದ ಭಂಡಿಯಂ ಪಱಿಯೆಬಿಟ್ಟರ | ಇಲ್ಲ | ಇಲ್ಲ | ೯೩ | ೭೪ |
| ಒಡಲ ಪೊಡರ್ಪಿನಿಂ ಸುಡಿಸಿಕೊಳ್ಳದೆ | ೧೩ | ೧೩ | ೨೦ | |
| ಒಡಲ ಪೊಡರ್ಪು ತುಟ್ಟಿಸದ ಮುನ್ನ*(ಕ) | ೧೪ | ೧೪ | ೨೨ | |
| ಒತ್ತರವೊತ್ತಿ ನಿದ್ರೆ ತಿಳಿದಂದದಿ | ೮೪ | ೮೪ | ೯೬ | |
| ಒಂದರೆಕಾಣಿ ಬಡ್ಡಿ ದೊರೆಕೊಂಡಡೆ | ೫೬ | ೫೬ | ೬೦ | ೫೧ |
| ಒಂದು ಗುಣಂ ಸಹಸ್ರಗುಣದಿಂ | ೯೫ | ೯೫ | ೧೭ | |
| ಒರೆದೊರೆದೆಂತುಟೆಂತುಟು ವಿಚಾರಿಸಿ | ೯೧ | ೯೧ | ೧೬ | |
| ಕಡಿದ ಬಳಿಕ್ಕ ಭೂರುಹಮದೇಂ ಫಲಮಪ್ಪುದೆ | ಇಲ್ಲ | ಇಲ್ಲ | ೮೮ | ೭೬ |
| ಕಡೆಯೆ ಕಡಂಗಿ ಕೂಡೆ ಕಡುಪಿಂ ಕಡಲಂ | ೮೯ | ೮೯ | ೧೩ | |
| ಕಲ್ಲಲಿಡುತ್ತ ಮೇಲುಗುಳುತೆಂಜಲನಿಕ್ಕುತೆ | ೮೮ | ೮೮ | ೯ | |
| ಕಲ್ಕೆಯ ಮಾತನೊಂದೆರಡನಾಡಿ | ೬೬ | ೬೬ | ೭೪ | ೬೦ |
| ಕಾಮದಿ ಕೋಪದಿಂ ಮದದಿ ಲೋಭದಿ | ಇಲ್ಲ | ಇಲ್ಲ | ೭೨ | |
| ಕುರುಡನೊಡರ್ಚಿ ಪುಲ್ಸರವಿಯಂ ಕಱು | ೩೮ | ೩೮ | ೩೧ | ೩೫ |
| ಕುಲಯುತನೆಂದಡುಬ್ಬಿ ಕಲಿಯೆಂದಡೆ | ೫೩ | ೫೩ | ೫೮ | ೫೦ |
| ಕುಲಸತಿಯಲ್ಲಿ ಕೊಕ್ಕರಿಕೆ ಪಾಸಿಯ | ೫೧ | ೫೧ | ೫೭ | ೪೮ |
| ಕೊಡುವುದನೀಶ್ವರಾರ್ಪಣವೆನುತ್ತ | ೧೯ | ೧೯ | ೨೯ | |
| ಗಿರಿಶ ಗಿರೀಶಯೀಶ್ವರ ಮಹೇಶ್ವರ (ಕೀ) | ೩೩ | ೩೩ | ೪೪ | |
| ಜನಪತಿ ಮಾತ್ರವೇ ಗುಣದೊಳೀಕ್ಷಿಸೆ (ಕ) | ೩ | ೩ | ಇಲ್ಲ | |
| ಜಲನಿಧಿ ಸೀಮೆ ರಾಜ್ಯವಿಭವಕ್ಕೆ* (ಕ) | ೨ | ೨ | ಇಲ್ಲ | |
| ಜೀವನವಾರಿ ಕಲ್ಲೆನಿಸಿ ನಿಲ್ಲದೆ ಜವ್ವನವಾರಿ | ೭೨ | ೭೨ | ೭೮ | ೬೭ |
| ಜ್ಞಾನದಿ ಮೋಕ್ಷಮಂ ಪಡೆಯವೇಳ್ಕು (ಸು) | ೧೫ | ೧೫ | ೨೧ | |
| ತರುಗಳೊಳೆಂತು ಕಲ್ಪತರು ವದ್ರಿಗಳೊಳ್ ಕನಕಾದ್ರಿ | ೪ | ೪ | ಇಲ್ಲ | |
| ತಡಹುತ ಹತ್ತನಾವರಿಸುತೊಂಬತಸೌಂಕುತ | ೮೧ | ೮೧ | ೮೯ | |
| ತಿಳಿಯೆ ಮಹೇಂದ್ರಜಾಲವಿದು | ೪೯ | ೪೯ | ೫೪ | ೪೬ |
| ತುಡುಗುಣಿಯಂತೆ ಬೆಂದ ಮನಮೆಲ್ಲಡೆ (ಕ) | ೩೯ | ೩೯ | ೩೭ | ೩೬ |

| | | | | |
|---|---|---|---|---|
| ಮುನಿವವನಾದೊಡಂ ಪೆಱರ್ಗೆ (ಕ.ಸು) | ೨೫ | ೨೫ | ೩೩ | ೨೭ |
| ಮೃಗ ಪಶು ಪಕ್ಷಿ ಕೀಟ ಬಹುಯೋನಿ | ೧೨ | ೧೨ | ೧೯ | |
| ಮೊದಲೆನಗೆನ್ನನೋವುದಭಿಲಾಷೆ | ೫೨ | ೫೨ | ೫೬ | ೪೯ |
| ಮೊದಲೆ ಸಮಸ್ತ ಶಾಸ್ತ್ರದಱಿವಿಲ್ಲದೆ | ೭೦ | ೭೦ | ೭೫ | ೬೫ |
| ರೋಗಿಯಪಥ್ಯ ವಸ್ತುಗಳನಿಚ್ಛೆವಡುತ್ತ | ೭೧ | ೭೧ | ೭೬ | ೬೬ |
| ವಿತ್ತದೊಳಂ ವಿಳಾಸಿನಿಯೊಳಂ ನೆಲೆಗೊಳ್ಳದೆ | ೪೦ | ೪೦ | ೩೯ | ೮೭ |
| ವೇದವೆ ಸಾಕ್ಷಿ ನಿಮ್ಮ ಮಹಿಮೋನ್ನತಿ | ೧೬ | ೧೬ | ೧೮ | |
| ವೇಷವ ತಾಳ್ದು ದೇಶವ ತೊಳಲ್ದು (ಗು) | ೯೪ | ೯೪ | ಇಲ್ಲ | |
| ಶಿವ ಶಿತಿಕಂಠ ಶಂಭು ಶಶಿಶೇಖರ (ಕೀ) | ೩೨ | ೩೨ | ೪೩ | |
| ಶ್ರೀಪತಿ ಶಾರದಾಪತಿ ಶಚೀಪತಿ | ೧ | ೧ | ೧ | |
| ಶ್ರುತಿನಿಕರಸ್ಮೃತಿವ್ರಜ ಪುರಾಣ | ೯ | ೯ | ೪ | |
| ಶ್ರುತಿಯುತ ನಿತ್ಯಕರ್ಮವನು ತಪ್ಪದೆ ಮಾಡಲು | ೬೫ | ೬೫ | ಇಲ್ಲ | |
| ಶ್ವೇತನೃಪಂ ಪರಾಂಗನೆಗೆ ಪೋಗುತ (ಗು) | ೯೬ | ೯೬ | ಇಲ್ಲ | |
| ಸಾವರ ಕಂಡು ಕಂಡು ತನುವಂ ಸ್ಥಿರವೆಂದು | ೯೯ | ೯೯ | ಇಲ್ಲ | |
| ಸ್ಥಾಣುವಿನಲ್ಲಿ ಚೋರನೆನಿಪಾ ಬಗೆಗಂಡಡೆ | ೭೪ | ೭೪ | ೭೯ | ೭೦ |
| ಸೂತನ ಸೂನುವೆಂದಱಿದ ಕರ್ಣನೊಳಿರ್ದು | ಇಲ್ಲ | ಇಲ್ಲ | ೯೪ | ೭೩ |
| ಸೂಸಿದ ಸೂಸಲಾಸೆಗಿಲಿಗಳ್ ಬಲೆಯೊಳ್ಕೆಡೆವಂತೆ | ೬೭ | ೬೭ | ೬೩ | ೬೨ |
| ಸ್ಥೂಲ ಶರೀರ ಸೂಕ್ಷ್ಮತನು ಕಾರಣದೇಹ | ಇಲ್ಲ | ೯೨ | ೬೭ | ಇಲ್ಲ |
| ಸೊರಹುತಲಿಂದ್ರ ಚಂದ್ರನಿವೆನೆಂಬ | ೬ | ೨ | | ೬ |
| ಹೃದಯದೊಳೊಂದಿಯೊಮ್ಮೆ ಶಿವ | ೨೧ | ೨೧ | ೨೭ | ೨೫ |
| | ೨೧ | ೧೭ | | ೨೪ |

1. ಗು=ಗುರುಶಂಕರೇಶ್ವರ ಶತಕದಲ್ಲಿರುವ ಪದ್ಯಗಳು. 2. ಅ=ಅಭಿನವಾದಿ ವಿದ್ಯಾನಂದನ ಕಾವ್ಯಸಾರದಲ್ಲಿ ಉದ್ಧೃತವಾಗಿರುವ ಪದ್ಯ. 3. ಬರೆಹದ ಗುರು ನಂಜೆಸ್ವಾಮಿಗಳು ಸೇರಿಸಿದ (1) ಶಿ=ಶಿವಕಾರುಣ್ಯಾಹ್ವಾನ ಶತಕದಲ್ಲಿಯೂ, (2) ಕೀ=ಕೀರ್ತಿಶತಕದಲ್ಲಿಯೂ ಉದ್ಧೃತವಾಗಿರುವ ಪದ್ಯಗಳು. 4. ಸು=ಸುಭಾಷಿತ ಮುಕ್ತಕಶತಕದಲ್ಲಿ ಸೇರಿಸಿಕೊಂಡಿರುವ ಪದ್ಯಗಳು. 5. ಕ=ಕರ್ಣಾಟಕ ಕವಿಚರಿತೆಯಲ್ಲಿ ಉಲ್ಲೇಖವಾಗಿರುವ ಪದ್ಯಗಳು.

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಸರಿ | ಸೇರಿಸಿ |
|---|---|---|---|---|
| iii | 17 | ವನ್ನು, | ವನ್ನೂ | |
| vi | 3 | ಪರಿಣಮಸುತ್ತ | ಪರಿಣಮಿಸುತ್ತ | |
| viii | 5 | ತತ್ತ್ವೋಚಿತವು | ತತ್ತ್ವೋಚಿತವೂ | |
| ,, | 18ನೆಯ ಪಂಕ್ತಿಯ ಆದಿಯಲ್ಲಿ | | | ೨ |
| ix | 13 | ವೃತ್ತದಿಂಪ | ವೃತ್ತದಿಂದ | |
| ,, | 30 | ದಿಂದ | ದಿಂದಂ | |
| xiv | 14 | ಹುಟ್ಟರಬಹುದು | ಹುಟ್ಟಿರಬಹುದು | |
| xvi | 12 | ಯೊಕ್ಕನ ಮೆಣ್ದೆ | ಯೊಕ್ಕನಮೆಣ್ದೆ | |
| ,, | 18 | ಕೊಬ್ಬಿಫ | ಕೊಬ್ಬಿ ಫ | |
| xix | 3 | ಕೃತ್ಯನಾದೆ | ಕೃತಕೃತ್ಯನಾದೆ | |
| xxiii | 1 | ಪದವಿ | ಪದಪಿ | |
| ,, | 3 | ನಿಮ್ಮನೇ | ನಿಮ್ಮ ನೇ | |
| ,, | 22 | ಕೇಳ್ವಿ | ಕೇಳ್ವ | |
| ,, | 24 | ಜಾರುರೆ | ಜಾಗುರೆ | |
| ,, | 25 | ಧೀರುರೆ | ಧಿರುರೆ | |
| xxix | 11 | ಸೆನ್ಯ | ಸೈನ್ಯ | |
| xxxvii | 4–5 | ಕನ್ನಡಿಸಿಕೆ | ಕನ್ನಡಿಸಿರೆ | |
| ,, | 26 | ಉಳಿಯಲ್ಲಿಲ್ಲವೂ | ಉಳಿಯಲಿಲ್ಲವೂ | |
| xxxviii | 21 | ಅರಿಯಬಹುದು | ಅರಿಯಬಹುದು. | |
| ,, | 29 | ಮಲ್ಲಣ್ಣಾರ್ಯರೇ | ಮಲ್ಲಣಾರ್ಯರೇ | |
| xxxix | 15 | ಜಕ್ಕಣ್ಣ ಒಡೆಯ | ಜಕ್ಕಣ್ಣ ಒಡೆಯ | |
| xL | 24 | ಪುಂದು | ಪುರದ | |
| xLvi | 16 | ಗೊಳಗಾಗಿ | ಗೊಳಗಾದ | |
| ,, | 18 | ಕೃಪೆಯಿದಲೆ | ಕೃಪೆಯಿಂದಲೆ | |
| ,, | 19 | ಚಿಂತೆನೆಯಲ್ಲಿ | ಚಿಂತನೆಯಲ್ಲಿ | |
| ೬ | 2 | ಹದಿನಾಲು, | ಹದಿನಾಲ್ಕು | |
| ೧೨ | 15 | ಇನ್ನೇನನ್ನೂ | ಇನ್ನೇನನ್ನೂ | |
| ೨೨ | 1 | ಜಾರಯ | ಜಾರೆಯ | |
| ೫೮ | 23 | ಆಮಳಕ | —ಅಮಳಕ | |

